पूर्णप्रज्ञसंशोधनमन्दिरम्
नवदेहलीस्थमानवसंसाधनविकासमन्त्रालयाधीन-
राष्ट्रियसंस्कृतसंस्थानेन सम्मानितम्

श्रीमदानन्दतीर्थभगवत्पादाचार्यविरचितम्

# श्रीमद्ब्रह्मसूत्रभाष्यम्

श्रीजगन्नाथयतिविरचितभाष्यदीपिका-सूत्रदीपिकासहितम्

(प्रथमोऽध्यायः)

सम्पादकः

विद्वान् के. शङ्करनारायण अडिगः एम्.ए.एम्.फिल्

उपनिदेशकः, पूर्णप्रज्ञसंशोधनमन्दिरम्, बेङ्गलूरु-२८

प्रकाशनम्

पूर्णप्रज्ञसंशोधनमन्दिरम्

पूर्णप्रज्ञविद्यापीठम्, बेङ्गलूरु-२८

२००८

पूर्णप्रज्ञसंशोधनमन्दिरम्
नवदेहलीस्थमानवसंसाधनविकासमन्त्रालयाधीन
राष्ट्रियसंस्कृतसंस्थानेन सम्मानितम्

श्रीमदानन्दतीर्थभगवत्पादाचार्यविरचितम्

# श्रीमद्ब्रह्मसूत्रभाष्यम्

श्रीजगन्नाथयतिविरचितभाष्यदीपिका-सूत्रदीपिकासहितम्

(प्रथमाध्यायः)

सम्पादकः

विद्वान् के. शङ्करनारायण अडिगः एम्.ए. एम्.फिल्

उपनिदेशकः , पूर्णप्रज्ञसंशोधनमन्दिरम् बेङ्गलूरु - २८

प्रकाशनम्

पूर्णप्रज्ञसंशोधनमन्दिरम्

पूर्णप्रज्ञविद्यापीठम्, बेङ्गलूरु - २८

२००८

पूर्णप्रज्ञसंशोधनमन्दिरग्रन्थमाला – ४८

श्रीमदानन्दतीर्थभगवत्पादाचार्यविरचितम् **श्रीमद् ब्रह्मसूत्रभाष्यम्**
श्रीजगन्नाथयतिविरचितभाष्यदीपिका-सूत्रदीपिकासहितम् **(प्रथमाध्यायः)**

सम्पादकः

**पं. शङ्करनारायण अडिगः** एम्.ए. एम्.फिल्

उपनिदेशकः, पूर्णप्रज्ञसंशोधनमन्दिरम् बेङ्गलूरु - २८

*This Publication is brought out by the generous financial help of*

**Rashtriya Sanskrit Samsthan, (Deemed University ), New Delhi**

प्रकाशनम् -

**पूर्णप्रज्ञसंशोधनमन्दिरम्**

पूर्णप्रज्ञविद्यापीठम्, कत्तरिगुप्पा मेन्रोड्, बेङ्गलूरु - २८

| | |
|---|---|
| पुटानि | : ५७ + ६६६ |
| प्रथममुद्रणम् | : २००८ |
| मुद्रितपुस्तकसङ्ख्या | : १००० |
| मूल्यम् | : २४० रूप्यकाणि |
| मुद्रणालयः | : राष्ट्रोत्थान मुद्रण |

**POORNAPRAJNA SAMSHODHANA MANDIRAM**

Recognised by Rashtriya Sanskrit Samsthan, (Deemed University)
Ministry of H.R.D., Govt. of India, New Delhi

# ŚRIMAD BRAHMASŪTRA BHĀṢYAM

of

**Sri Madhwacharya**

with Bhashyadeepika and Sutradeepika of

**Sri Jagannathatirtha**

**(Chapter 1)**

Editor :

**Pt. K. Shankaranarayana Adiga**

Deputy Director, Poornaprajna Samshodhana Mandiram,
Bangalore-28

**Publisher :**
Poornaprajna Samshodhana Mandiram,
Poornaprajna Vidyapeetha, Bangalore -560 028

**2008**

Poornaprajna Samshodhana Mandiram Series No. 48

# Srimad Brahma Sutra Bhashyam of Sri Madhwacharya

with Bhashyadeepika and Sutradeepika of Sri Jagannathathirtha

(Chapter 1)

Editor :

**Pt. K. Shankaranarayana Adiga**

Deputy Director, Poornaprajna Samshodhana Mandiram,

Bangalore-28

Published by :

**Poornaprajna Samshodhana Mandiram**

Poornaprajna Vidyapeetha, Katriguppa Main Road,

Bangalore -560 028

*This Publication is brought out by the generous financial help of*

**Rashtriya Sanskrit Samsthan,**
**(Deemed University ),**
**New Delhi**

| | |
|---|---|
| Pages | : 57+666 |
| First Edition | : 2008 |
| Copies | : 1000 |
| Price | : 240/= |
| Printed by | : Rashtrotthana Mudrana |

# अनुग्रहसन्देशः

हनुमद्भाष्यस्य गाम्भीर्यं देवोत्तमैर्गेगीयमानं नाल्पप्रज्ञैर्विज्ञेयमिति च विद्यावृद्धानां शास्त्रपारावारपारङ्गतानां महातपस्विनां दृढोक्तिः । यथाऽऽहुः– ‘सहस्रार्थस्य भाष्यस्य’ इति ‘आनन्दतीर्थभगवद्वचसां विशिष्टव्याख्यानकर्मणि सुरा ह्यधिकारिणोऽत्र’ इति च ।

यद्यपि श्रीमज्जयतीर्थपूज्यचरणैः तत्त्वप्रकाशिकायां हृद्ययाऽनवद्यया च शैल्या भाष्यव्याख्यानं व्यधायि । तथाऽप्यध्येतॄणां विदुषामपि भगवत्पादाचार्योल्लिखितश्रुतिस्मृतीनां प्रतिपदार्थविज्ञानं क्लेशावहं भवति । जगन्नाथतीर्थप्रणीतेयं भाष्यदीपिका अन्वर्थनामिका भाष्योदाहृतश्रुतिस्मृतिव्याख्यानपरा तत्रतत्र व्याख्यानान्तर-विमर्शनदक्षा च राजतेतमाम् । यद्यप्ययं ग्रन्थः पञ्चाशद्वर्षेभ्यः प्राग् व्यासराजमठाधीशैः विद्यापयोनिधितीर्थस्वामिभिः मुद्रापित आसीत् । अध्येतॄणामिदानीं मुद्रितग्रन्थानामनुपलब्धत्वात् पुनर्मुद्रणार्थमादेशः प्रादायि । पूर्णप्रज्ञसंशोधनमन्दिरोपनिदेशकः, अस्मत्प्रियच्छात्रः शङ्करनारायण अडिगः इत्युपाह्वय प्रथमाध्यायस्य नैकमातृकास्थपाठान्तरोल्लेखनपुरस्सरं महता यत्नेन शुद्धपाठं निर्धार्य ग्रन्थमेतं समर्पितवान् । अस्येमां शास्त्रसेवां वयं सानन्दमभिनन्दामः ॥

*इत्यनेकनारायणस्मरणानि*

दि.१-२-२००८ **श्रीश्रीविश्वेशतीर्थश्रीपादाः**

पूर्णप्रज्ञविद्यापीठम् , बेङ्गळूरु श्रीपेजावराधोक्षजमठः, उडुपि

## Director's Note

In the lineage of Sri Vyasaraja Matha,many stalwarts have made luxurious contributions to the Madhva School of thought. Among them Sri Jagannatha Yati stands out as a champion. He is more known by his work and rightly called Bhashya Deepikacharya than by his Ashrama name as Sri Jagannatha Yati.

This Speaks of the uniqueness of the work he has given to the scholarly world. In Tatwa Prakashika teeka on Brahma Sutra Bhashya, all the valid references quoted by Sri Madhvacharya have not been explained. There was an absolute need for clarifications and explanations even for scholars who had made in depth, study of Vedas and Upanishads. Sri Jagannatha Yati thus has helped the genuine seekers by giving lucid and straight forward notes on such references and his own point of view, strengthening by understanding Tatwa Prakashika, While appreciating and admiring the earlier works of his seniors. He thus brings and the perfect unity and of thought and logic in the works of Sri Madhvacharya where, in some places, the chances of misreading and disjoints are there if not read between lines. He shows how superficial readings contd., me misleading. He stresses that not only a through study with devotion to the supreme could lead to the correct understanding of the interpretation of Sri Madhvacharya, paying glorious tributes to him.

Like Brahmasutra Bhashya, this great work, on the same line is unique in style and presentation of the valuable content. The very little is quite apt and befitting, giving many dimensions to the subject.

This great work was published some 80-Years ago, for the first time. During the reign of Sri Vidyapayonidhitirtha of Sri Vyasaraj matha, the second Edition was brought out.

They are out-of-stock now. As many genuine seekers were asking for it, we have undertaken this Publication.

The source of inspiration behind this useful venture is our founder H.H. SriSri Vishveshatirtha Swamiji. We express our gratitude and Pranamas.

We express our gratitude to Prof. V. Kutumba Sastry, Vice-chancellor of Rashtriya Sanskrit Sansthan, New Delhi and Sri C.S. Kaniyal, Finance Officer, Rashtriya Sanskrit Sansthan, New Delhi, for giving all-round support in academic activities.

Going through the manuscriple given by the well-known scholar of Dharwad Sri Govinda Rao Navalgundkar and the manuscripts of Research Institute, Vidwan Shankara narayana Adiga has taken a lot of effort to specify the textual differences. He has been able to fix the correct texts at places which highlights and supports the utility.

I heartily congratulate Vidwan Shankaranarayana Adiga for this useful work.

I thank the Rashtrotthana Mudrana, for their co-operation and for the neat get up.

*Sujanavidheya*

**Dr. A.V. Nagasampige**

**Director**

**Poornaprajna Samshodhana Mandhiram**

# ಉಪೋದ್ಘಾತ

**ವೇದಪ್ರವೃತ್ತಿ :-**

ಭಗವಂತ ಸ್ವತಃ ಸಚ್ಚಿದಾನಂದರೂಪ. ಅವನ ಪ್ರತಿಬಿಂಬನಾದ ಜೀವನು ಸಚ್ಚಿದಾನಂದ ರೂಪನೇ. ಇಂತಹ ಜೀವನಿಗೆ ತನ್ನದೆ ಆದ ಆನಂದಾದಿಗಳ ಅನುಭವಕ್ಕೆ ಸಂಸಾರದ ಬಂಧ ಅಡ್ಡಿಯಾಗಿದೆ. ಅನಾದಿಕಾಲದಿಂದಲೂ ಜೀವನೊಂದಿಗೆ ಸೇರಿಕೊಂಡ ಭಾವರೂಪ ಅಜ್ಞಾನ, ಕಾಮ, ಪ್ರಾರಬ್ಧಕರ್ಮ, ಲಿಂಗದೇಹ, ಸ್ವಗುಣಾಚ್ಛಾದಿಕಾ, ಪರಮಾಚ್ಛಾದಿಕಾ, ಈಶ್ವರೇಚ್ಛಾಗಳೆಂಬ ಜೀವಸ್ವರೂಪಕ್ಕೆ ಇರುವ ಏಳು ಆವರಣಗಳಿಂದಾಗಿ ಜೀವನಿಗೆ ಈ ಸಾಂಸಾರಿಕ ಬಂಧ ಪ್ರಾಪ್ತವಾಗಿದೆ. ಈ ಬಂಧವನ್ನು ಪರಿಹರಿಸಲು ಸಕಲ ಸದಾಗಮಗಳು ಪ್ರವೃತ್ತವಾಗಿವೆ. ಸದಾಗಮಗಳಾದರೂ ಸಮಸ್ತ ಜೀವಜಡಾತ್ಮಕವಾದ ಪ್ರಪಂಚದಿಂದ ವಿಷ್ಣುವು ಪಾರಮಾರ್ಥಿಕವಾಗಿ ಅತ್ಯಂತಭಿನ್ನ, ಹಾಗು ಅನಂತಕಲ್ಯಾಣಗುಣಪರಿಪೂರ್ಣ ಮತ್ತು ಸಕಲದೋಷರಹಿತ-ನಾಗಿದ್ದಾನೆಂದು ಪ್ರತಿಪಾದಿಸುವ ಮೂಲಕ ಜೀವರಿಗೆ ಒದಗಿಬಂದ ದುಃಖವನ್ನು ನಿವೃತ್ತಿಗೊಳಿಸುತ್ತವೆ.

ಇದನ್ನೇ ಶ್ರುತಿ ಹೇಳುತ್ತಿದೆ -

**'ಅದುಃಖಮಿತರತ್ ಸರ್ವಂ ಜೀವಾ ಏವ ತು ದುಃಖಿನಃ ।**
**ತೇಷಾಂ ದುಃಖ ಪ್ರಹಾಣಾಯ ಶ್ರುತಿರೇಷಾ ಪ್ರವರ್ತತೇ ॥'**

*(ಭಾಷ್ಯದೀಪಿಕೋದಾಹೃತಶ್ರುತಿಃ - 1-1-1)*

ಜಡಗಳಿಗೆ ದುಃಖವಿಲ್ಲ. ಜೀವರೆ ದುಃಖಿಗಳು . ಇವರ ದುಃಖನಿವಾರಣೆಗಾಗಿ ಶ್ರುತಿಗಳು ದುಃಖನಿವೃತ್ತಿ ಸಾಧನನೆನಿಸಿದ ಭಗವಂತನನ್ನು ಪ್ರತಿಪಾದಿಸುತ್ತವೆ. ವೇದಗಳಿಂದ ಭಗವಂತನ ಸರಿಯಾದ ಜ್ಞಾನವನ್ನು ಜೀವರು ಪಡೆದಾಗ ಭಗವಂತ ಪ್ರಸನ್ನನಾಗಿ ಜೀವರ ಬಂಧವಿಮೋಚನೆ ಮಾಡುತ್ತಾನೆ. ಇದು ವೇದಗಳಿಂದ ಆಗುವ ಮುಖ್ಯ ಉದ್ದೇಶಸಿದ್ಧಿ.

**ಅಪೌರುಷೇಯ ವೇದಗಳಿಂದಲೆ ಧರ್ಮಾದಿಗಳ ಸಿದ್ಧಿ :–**

ಇಂದ್ರಿಯಕ್ಕೆ ಅಗೋಚರಗಳಾದ ಧರ್ಮ–ಅಧರ್ಮ, ಸ್ವರ್ಗ–ನರಕ, ಮುಂತಾದ ಅತೀಂದ್ರಿಯ ವಸ್ತುಗಳ ಸಿದ್ಧಿ ವೇದಗಳಿಂದಲೇ ಆಗುವುದು. ಅದಕ್ಕಾಗಿ ಅಪೌರುಷೇಯ ಆಗಮಗಳನ್ನು ಪ್ರತಿಯೊಬ್ಬ ದಾರ್ಶನಿಕನು ಒಪ್ಪಬೇಕು.

ಇದನ್ನೇ ಆಚಾರ್ಯರು ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ -

**'ನ ಹಿ ಧರ್ಮಾದಿಸಿದ್ಧಿಃ ಸ್ಯಾನ್ನಿತ್ಯವಾಕ್ಯಂ ವಿನಾ ಕ್ವಚಿತ್'**

*(ಅನುವ್ಯಾಖ್ಯಾನ : 1-1-1 ಶ್ಲೋಕ – 68)*

ಧರ್ಮಾದಿಗಳನ್ನು ಪೌರುಷೇಯ ಆಗಮಗಳಿಂದ ಸಾಧಿಸಲು ಸಾಧ್ಯವಿಲ್ಲ. **'ಪುಂವಾಕ್ಯಂ ಜ್ಞಾಪಕಂ ನ ತತ್ '** *(ಅನು :1-1-1,ಶ್ಲೋಕ – 69).*

ಪ್ರತಿಯೊಂದು ದರ್ಶನದವರು ತಮ್ಮ ದರ್ಶನಪ್ರವರ್ತಕ ಮತಾಚಾರ್ಯನೇ ಸರ್ವಜ್ಞನೆಂದು ಅವನು ರಚಿಸಿದ ಆಗಮವೇ ಪ್ರಮಾಣವೆಂದು ಹೇಳುತ್ತಾರೆ. ಆದರೆ ಅವುಗಳು ಪರಸ್ಪರ ವಿರುದ್ಧಗಳಾಗಿವೆ. ಅವುಗಳಲ್ಲಿ ಪುರುಷದೋಷ ಪ್ರಯುಕ್ತಗಳಾದ ಅಬೋಧಕತ್ವ, ವಿಪರೀತಬೋಧಕತ್ವ ಮುಂತಾದ ದೋಷಗಳು ಬರಲು ಸಾಧ್ಯ. ಪುರುಷವಾಕ್ಯಗಳು ಪರಸ್ಪರ ವಿರುದ್ಧವಾದವುಗಳಾಗಿವೆ. ಅವುಗಳಿಂದ ಯಾವುದೇ ವಿಷಯ ಸಿದ್ಧಿಯಾಗಲಾರದು. ಅದಕ್ಕಾಗಿ ಅಪೌರುಷೇಯವಾದ ವೇದಗಳನ್ನು ಒಪ್ಪುವುದು ಆವಶ್ಯಕ. ವೇದಗಳು ಅಪೌರುಷೇಯ ಎಂಬ ವಿಷಯದಲ್ಲಿ **'ವೇದಾಂತಕೃದ್ ವೇದವಿದೇವ ಚಾಹಂ'** (ಭ.ಗೀ.15-15) ಎಂಬ ಗೀತಾವಾಕ್ಯವೇ ಪ್ರಮಾಣ. ಇಲ್ಲಿ 'ನಾನು ವ್ಯಾಸರೂಪದಿಂದ ಬ್ರಹ್ಮಸೂತ್ರಗಳನ್ನು ರಚನೆ ಮಾಡಿದವನು ' ಎಂದು ಹೇಳಿದ ಶ್ರೀಕೃಷ್ಣ ತಾನು ವೇದವನ್ನು ಬಲ್ಲವನಾಗಿದ್ದೇನೆಯೇ ಹೊರತು ಅದನ್ನು ರಚಿಸಿದವನಲ್ಲ ಎಂದು ನುಡಿದಿದ್ದಾನೆ. ಆದ್ದರಿಂದ ವೇದಗಳನ್ನು ರಚಿಸಿದ ವ್ಯಕ್ತಿಯ ಪ್ರಸಿದ್ಧಿ ಇಲ್ಲದಿರುವುದರಿಂದ ಅವು ಅಪೌರುಷೇಯಗಳೆಂದೇ ದರ್ಶನತ್ರಯಾಚಾರ್ಯರು ನಂಬಿಕೊಂಡು ಬಂದಿದ್ದಾರೆ.

**ವಿಷ್ಣುವೇ ಸಕಲವೇದದಿಂದ ಮುಖ್ಯಪ್ರತಿಪಾದ್ಯ :–**

ಸಕಲ ವೇದಗಳು ಪರಮಮುಖ್ಯವೃತ್ತಿಯಿಂದ ವಿಷ್ಣುವನ್ನೇ ಪ್ರತಿಪಾದಿಸುತ್ತವೆ. ವೇದಗಳಲ್ಲಿ ಹೇಳಿರುವ ಅಗ್ನಿ ಮುಂತಾದ ಸಕಲ ನಾಮಗಳು ವಿಷ್ಣುವನ್ನೇ ವಾಚ್ಯನನ್ನಾಗಿ ಪ್ರತಿಪಾದಿಸುವ ಮೂಲಕ ಅವನನ್ನೇ ಪ್ರವೇಶಿಸುತ್ತಿವೆ ಎಂದು ಭಾಲ್ಲವೇಯ ಶ್ರುತಿ ಹೇಳುತ್ತಿದೆ –

# ಉಪೋದ್ಘಾತ

### ವೇದಪ್ರವೃತ್ತಿ :-

ಭಗವಂತ ಸ್ವತಃ ಸಚ್ಚಿದಾನಂದರೂಪ. ಅವನ ಪ್ರತಿಬಿಂಬನಾದ ಜೀವನು ಸಚ್ಚಿದಾನಂದ ರೂಪನೇ. ಇಂತಹ ಜೀವನಿಗೆ ತನ್ನದೆ ಆದ ಆನಂದಾದಿಗಳ ಅನುಭವಕ್ಕೆ ಸಂಸಾರದ ಬಂಧ ಅಡ್ಡಿಯಾಗಿದೆ. ಅನಾದಿಕಾಲದಿಂದಲೂ ಜೀವನೊಂದಿಗೆ ಸೇರಿಕೊಂಡ ಭಾವರೂಪ ಅಜ್ಞಾನ, ಕಾಮ, ಪ್ರಾರಬ್ಧಕರ್ಮ, ಲಿಂಗದೇಹ, ಸ್ವಗುಣಾಚ್ಛಾದಿಕಾ, ಪರಮಾಚ್ಛಾದಿಕಾ, ಈಶ್ವರೇಚ್ಛಾಗಳೆಂಬ ಜೀವಸ್ವರೂಪಕ್ಕೆ ಇರುವ ಏಳು ಆವರಣಗಳಿಂದಾಗಿ ಜೀವನಿಗೆ ಈ ಸಾಂಸಾರಿಕ ಬಂಧ ಪ್ರಾಪ್ತವಾಗಿದೆ. ಈ ಬಂಧವನ್ನು ಪರಿಹರಿಸಲು ಸಕಲ ಸದಾಗಮಗಳು ಪ್ರವೃತ್ತವಾಗಿವೆ. ಸದಾಗಮಗಳಾದರೂ ಸಮಸ್ತ ಜೀವಜಡಾತ್ಮಕವಾದ ಪ್ರಪಂಚದಿಂದ ವಿಷ್ಣುವು ಪಾರಮಾರ್ಥಿಕವಾಗಿ ಅತ್ಯಂತಭಿನ್ನ, ಹಾಗು ಅನಂತಕಲ್ಯಾಣಗುಣಪರಿಪೂರ್ಣ ಮತ್ತು ಸಕಲದೋಷರಹಿತ-ನಾಗಿದ್ದಾನೆಂದು ಪ್ರತಿಪಾದಿಸುವ ಮೂಲಕ ಜೀವರಿಗೆ ಒದಗಿಬಂದ ದುಃಖವನ್ನು ನಿವೃತ್ತಿಗೊಳಿಸುತ್ತವೆ.

ಇದನ್ನೇ ಶ್ರುತಿ ಹೇಳುತ್ತಿದೆ -

**'ಅದುಃಖಮಿತರತ್ ಸರ್ವಂ ಜೀವಾ ಏವ ತು ದುಃಖಿನಃ ।**
**ತೇಷಾಂ ದುಃಖ ಪ್ರಹಾಣಾಯ ಶ್ರುತಿರೇಷಾ ಪ್ರವರ್ತತೇ ॥'**

*(ಭಾಷ್ಯದೀಪಿಕೋದಾಹೃತಶ್ರುತಿಃ - 1-1-1)*

ಜಡಗಳಿಗೆ ದುಃಖವಿಲ್ಲ. ಜೀವರೆ ದುಃಖಿಗಳು. ಇವರ ದುಃಖನಿವಾರಣೆಗಾಗಿ ಶ್ರುತಿಗಳು ದುಃಖನಿವೃತ್ತಿ ಸಾಧನನೆನಿಸಿದ ಭಗವಂತನನ್ನು ಪ್ರತಿಪಾದಿಸುತ್ತವೆ. ವೇದಗಳಿಂದ ಭಗವಂತನ ಸರಿಯಾದ ಜ್ಞಾನವನ್ನು ಜೀವರು ಪಡೆದಾಗ ಭಗವಂತ ಪ್ರಸನ್ನನಾಗಿ ಜೀವರ ಬಂಧವಿಮೋಚನೆ ಮಾಡುತ್ತಾನೆ. ಇದು ವೇದಗಳಿಂದ ಆಗುವ ಮುಖ್ಯ ಉದ್ದೇಶಸಿದ್ಧಿ.

## ಅಪೌರುಷೇಯ ವೇದಗಳಿಂದಲೆ ಧರ್ಮಾದಿಗಳ ಸಿದ್ಧಿ :–

ಇಂದ್ರಿಯಕ್ಕೆ ಅಗೋಚರಗಳಾದ ಧರ್ಮ-ಅಧರ್ಮ, ಸ್ವರ್ಗ-ನರಕ, ಮುಂತಾದ ಅತೀಂದ್ರಿಯ ವಸ್ತುಗಳ ಸಿದ್ಧಿ ವೇದಗಳಿಂದಲೇ ಆಗುವುದು. ಅದಕ್ಕಾಗಿ ಅಪೌರುಷೇಯ ಆಗಮಗಳನ್ನು ಪ್ರತಿಯೊಬ್ಬ ದಾರ್ಶನಿಕನು ಒಪ್ಪಬೇಕು.

ಇದನ್ನೇ ಆಚಾರ್ಯರು ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ -

**'ನ ಹಿ ಧರ್ಮಾದಿಸಿದ್ಧಿಃ ಸ್ಯಾನ್ನಿತ್ಯವಾಕ್ಯಂ ವಿನಾ ಕ್ವಚಿತ್'**

*(ಅನುವ್ಯಾಖ್ಯಾನ : 1-1-1 ಶ್ಲೋಕ – 68)*

ಧರ್ಮಾದಿಗಳನ್ನು ಪೌರುಷೇಯ ಆಗಮಗಳಿಂದ ಸಾಧಿಸಲು ಸಾಧ್ಯವಿಲ್ಲ. **'ಪುಂವಾಕ್ಯಂ ಜ್ಞಾಪಕಂ ನ ತತ್ '** *(ಅನು :1-1-1, ಶ್ಲೋಕ – 69).*

ಪ್ರತಿಯೊಂದು ದರ್ಶನದವರು ತಮ್ಮ ದರ್ಶನಪ್ರವರ್ತಕ ಮತಾಚಾರ್ಯನೇ ಸರ್ವಜ್ಞನೆಂದು ಅವನು ರಚಿಸಿದ ಆಗಮವೇ ಪ್ರಮಾಣವೆಂದು ಹೇಳುತ್ತಾರೆ. ಆದರೆ ಅವುಗಳು ಪರಸ್ಪರ ವಿರುದ್ಧಗಳಾಗಿವೆ. ಅವುಗಳಲ್ಲಿ ಪುರುಷದೋಷ ಪ್ರಯುಕ್ತಗಳಾದ ಅಬೋಧಕತ್ವ, ವಿಪರೀತಬೋಧಕತ್ವ ಮುಂತಾದ ದೋಷಗಳು ಬರಲು ಸಾಧ್ಯ. ಪುರುಷವಾಕ್ಯಗಳು ಪರಸ್ಪರ ವಿರುದ್ಧವಾದವುಗಳಾಗಿವೆ. ಅವುಗಳಿಂದ ಯಾವುದೇ ವಿಷಯ ಸಿದ್ಧಿಯಾಗಲಾರದು. ಅದಕ್ಕಾಗಿ ಅಪೌರುಷೇಯವಾದ ವೇದಗಳನ್ನು ಒಪ್ಪುವುದು ಆವಶ್ಯಕ. ವೇದಗಳು ಅಪೌರುಷೇಯ ಎಂಬ ವಿಷಯದಲ್ಲಿ **'ವೇದಾಂತಕೃದ್ ವೇದವಿದೇವ ಚಾಹಂ'** (ಭ.ಗೀ.15-15) ಎಂಬ ಗೀತಾವಾಕ್ಯವೇ ಪ್ರಮಾಣ. ಇಲ್ಲಿ 'ನಾನು ವ್ಯಾಸರೂಪದಿಂದ ಬ್ರಹ್ಮಸೂತ್ರಗಳನ್ನು ರಚನೆ ಮಾಡಿದವನು' ಎಂದು ಹೇಳಿದ ಶ್ರೀಕೃಷ್ಣ ತಾನು ವೇದವನ್ನು ಬಲ್ಲವನಾಗಿದ್ದೇನೆಯೇ ಹೊರತು ಅದನ್ನು ರಚಿಸಿದವನಲ್ಲ ಎಂದು ನುಡಿದಿದ್ದಾನೆ. ಆದ್ದರಿಂದ ವೇದಗಳನ್ನು ರಚಿಸಿದ ವ್ಯಕ್ತಿಯ ಪ್ರಸಿದ್ಧಿ ಇಲ್ಲದಿರುವುದರಿಂದ ಅವು ಅಪೌರುಷೇಯಗಳೆಂದೇ ದರ್ಶನತ್ರಯಾಚಾರ್ಯರು ನಂಬಿಕೊಂಡು ಬಂದಿದ್ದಾರೆ.

## ವಿಷ್ಣುವೇ ಸಕಲವೇದದಿಂದ ಮುಖ್ಯಪ್ರತಿಪಾದ್ಯ :–

ಸಕಲ ವೇದಗಳು ಪರಮಮುಖ್ಯವೃತ್ತಿಯಿಂದ ವಿಷ್ಣುವನ್ನೇ ಪ್ರತಿಪಾದಿಸುತ್ತವೆ. ವೇದಗಳಲ್ಲಿ ಹೇಳಿರುವ ಅಗ್ನಿ ಮುಂತಾದ ಸಕಲ ನಾಮಗಳು ವಿಷ್ಣುವನ್ನೇ ವಾಚ್ಯನನ್ನಾಗಿ ಪ್ರತಿಪಾದಿಸುವ ಮೂಲಕ ಅವನನ್ನೇ ಪ್ರವೇಶಿಸುತ್ತಿವೆ ಎಂದು ಭಾಲ್ಲವೇಯ ಶ್ರುತಿ ಹೇಳುತ್ತಿದೆ –

**'ನಾಮಾನಿ ಸರ್ವಾಣಿ ಯಮಾವಿಶಂತಿ ತಂ ವೈ ವಿಷ್ಣುಂ ಪರಮಮುದಾಹರಂತಿ'**

*(ಬ್ರ.ಸೂ.ಭಾ. ಉದಾ : ಭಾಲ್ಲವೇಯಶ್ರುತಿ – 1-1-1)*

ಶ್ರೀಕೃಷ್ಣನೂ ಗೀತೆಯಲ್ಲಿ ಸಕಲವೇದಗಳ ಅರ್ಥ ತಾನೇ ಎಂದು ತಿಳಿಸಿದ್ದಾನೆ – **'ವೇದೈಶ್ಚ ಸರ್ವೈರಹಮೇವ ವೇದ್ಯಃ'** (ಭ.ಗೀ.15-15) ಕಾಠಕೋಪನಿಷತ್ತು ಸಕಲ ವೇದಗಳು ಓಂಕಾರವಾಚ್ಯನಾದ ವಿಷ್ಣುವಿನ ಸ್ವರೂಪವನ್ನು ಪ್ರತಿಪಾದಿಸುತ್ತವೆ ಎಂದು ಹೇಳಿದೆ – **'ಸರ್ವೇ ವೇದಾ ಯತ್ಪದಮಾಮನಂತಿ'** (ಕಠ.2.15).

ಪರಮ ಮುಖ್ಯವೃತ್ತಿಯಿಂದ ಇಂದ್ರಾದಿಶಬ್ದಗಳು ಇಂದ್ರಾದಿದೇವತೆಗಳನ್ನು ಹೇಳುವುದೇ ಇಲ್ಲವೆಂದು ಭಾಲ್ಲವೇಯಶ್ರುತಿ ಹೇಳಿದೆ –

**'ನಾಮಾನಿ ವಿಶ್ವಾನಿ ನ ಸಂತಿ ಲೋಕೇ'**

*(ಬ್ರ.ಸೂ.ಭಾ. ಉದಾ – ಭಾಲ್ಲವೇಯಶ್ರುತಿಃ 1-1-1)*

ಇಂದ್ರಾದಿ ಪದಗಳು ಇಂದ್ರಾದಿದೇವತೆಗಳನ್ನು ಬೋಧಿಸದೇ ವಿಷ್ಣುವನ್ನೇ ಹೇಳುವುದಾದರೆ ಸಮಸ್ತ ಸೂಕ್ತಗಳು ವಿಷ್ಣುಸೂಕ್ತವೆಂದಾಗುತ್ತವೆ . ಹೀಗಾದರೆ ವೇದದಲ್ಲಿ ಇಂದ್ರಸೂಕ್ತ , ಅಗ್ನಿಸೂಕ್ತ , ವಾಯುಸೂಕ್ತ ಮೊದಲಾದ ಸೂಕ್ತಭೇದ ವ್ಯವಸ್ಥೆಯು ಇರದೇ ಹೋಗಬೇಕಾದೀತು ಎಂಬ ಆಕ್ಷೇಪ ಬರಬಹುದು. ಆದರೆ ಇಂದ್ರಾದಿಶಬ್ದಗಳು ಪರಮಮುಖ್ಯವೃತ್ತಿಯಿಂದ ವಿಷ್ಣುವಾಚಕಗಳಾಗಿದ್ದರೂ ಮುಖ್ಯವೃತ್ತಿಯಿಂದ ಇಂದ್ರಾದಿದೇವತೆಗಳನ್ನೂ ಪ್ರತಿಪಾದಿಸುತ್ತವೆ. ಹೀಗಾಗಿ ಇಂದ್ರ ಸೂಕ್ತ – ಅಗ್ನಿಸೂಕ್ತ ಮುಂತಾದ ಸೂಕ್ತವ್ಯವಸ್ಥೆಯು ಸರಿಹೊಂದುತ್ತದೆ . ಇದನ್ನೇ ಪೈಂಗಿಶ್ರುತಿ ಪ್ರಚುರ ಪಡಿಸಿದೆ.

**'ಸರ್ವೋತ್ಕರ್ಷೇ ದೇವದೇವಸ್ಯ ವಿಷ್ಣೋ-**
**ರ್ಮಹಾತಾತ್ಪರ್ಯಂ ನೈವ ಚಾನ್ಯತ್ರ ಸತ್ಯಮ್ ।**
**ಅವಾಂತರಂ ತತ್ಪರತ್ವಂ ತದನ್ಯತ್**
**ಸರ್ವಾಗಮಾನಾಂ ಪುರುಷಾರ್ಥಸ್ತತೋಽತಃ ॥'**

*(ವಿ.ತ. ವಿನಿರ್ಣಯ. ಉದಾಹೃತ . ಪರಿಚ್ಛೇದ – 1)*

ಅಥವಾ ಅಗ್ನಿಮುಂತಾದ ದೇವತೆಗಳಲ್ಲಿ ಇರುವ ಅದೇ ಹೆಸರಿನ ಭಗವಂತನ ರೂಪಗಳು ಅಗ್ನಿಸೂಕ್ತ , ಇಂದ್ರಸೂಕ್ತ ಮುಂತಾದ ಸೂಕ್ತಗಳಿಂದ ಪ್ರತಿಪಾದಿತಗಳಾಗಿವೆ. ಹೀಗೆ ಭಗವಂತನದ್ದೇ ಆದ ಅಗ್ನಿ – ಇಂದ್ರಮುಂತಾದ ನಾಮಭೇದದಿಂದ ಅಗ್ನ್ಯಾದಿ ಸೂಕ್ತ ವ್ಯವಸ್ಥೆಯು ವೇದದಲ್ಲಿ ಆಗುತ್ತದೆ .

'ಪೃಥಗ್ ರೂಪಾಣಿ ವಿಷ್ಣೋಸ್ತು ದೇವತಾಂತರಗಾಣಿ ಚ ।
ಅಗ್ನ್ಯಾದಿಸೂಕ್ತವಾಚ್ಯಾನಿ ನಾಮ್ನಾ ಸೂಕ್ತಾಭಿಧಾ ಭವೇತ್ ॥'

*(ಋಗ್ಭಾಷ್ಯಂ - ಅಧ್ಯಾಯ -1)*

ಆದ್ದರಿಂದ ಸರ್ವೋತ್ತಮನಾದ ವಿಷ್ಣುವೇ ಸಮಸ್ತವೇದಗಳಿಂದ ಪ್ರತಿಪಾದ್ಯನೆಂದು ಸಿದ್ಧವಾಗುವುದು.

**ಬ್ರಹ್ಮಸೂತ್ರಗಳ ಮಹತ್ವ :-**

ಹೀಗೆ 'ವಿಷ್ಣುವು ಸಕಲವೇದ ಪ್ರತಿಪಾದ್ಯ ' ಎಂದು ಯಥಾರ್ಥನಿಶ್ಚಯ ಉಂಟಾಗುವುದು ಬ್ರಹ್ಮಸೂತ್ರಗಳ ಸಹಾಯದಿಂದಲೇ. ವೇದವಾಕ್ಯಗಳು ಆಪಾತತಃ ಪರಸ್ಪರ ವಿರುದ್ಧವಾದ ಅರ್ಥವನ್ನು ಕೆಲವುಕಡೆ ಪ್ರತಿಪಾದಿಸುತ್ತಿವೆ . ಕೆಲವು ಕಡೆ ಸಂಶಯ , ಇನ್ನು ಕೆಲವು ಕಡೆ ವಿಪರೀತ ಜ್ಞಾನ ಅವುಗಳಿಂದ ಉಂಟಾಗುವುದರಿಂದ ಅದರ ನಿವಾರಣೆಗಾಗಿ ದ್ವಾಪರಯುಗದ ಅಂತ್ಯಭಾಗದಲ್ಲಿ ಅವತರಿಸಿದ ವೇದವ್ಯಾಸರು ಬ್ರಹ್ಮಸೂತ್ರಗಳನ್ನು ರಚಿಸಿದರು.

ಬ್ರಹ್ಮಸೂತ್ರಗಳು ಶ್ರುತ್ಯರ್ಥನಿರ್ಣಯಿಸಲು ಉಪಯುಕ್ತಗಳಾದ ನ್ಯಾಯಗಳ ನಿಬಂಧನ ರೂಪವಾಗಿರುವುದರಿಂದ ಇವುಗಳ ಸಹಾಯದಿಂದ ವೇದಗಳಿಂದ ಯಥಾರ್ಥಜ್ಞಾನ ಉಂಟಾಗುತ್ತದೆ. ಬ್ರಹ್ಮ ಅಂದರೆ ವೇದ. ತಸ್ಯ ಸೂತ್ರಾಣಿ– ವೇದಾರ್ಥ ನಿರ್ಣಾಯಕ ಸೂತ್ರವಾದ್ದರಿಂದ ಇವು ಬ್ರಹ್ಮ ಸೂತ್ರಗಳೆನಿಸಿವೆ. ಅಥವಾ ಬ್ರಹ್ಮ ಅಂದರೆ ವೇದಾರ್ಥನಾದ ಪರಬ್ರಹ್ಮ . ಅವನ ಸೂತ್ರಗಳು ಅಂದರೆ ಅವನ ಸ್ವರೂಪ ನಿರ್ಣಯಿಸುವ ಸೂತ್ರಗಳೇ ಬ್ರಹ್ಮಸೂತ್ರಗಳೆನಿಸಿವೆ.

**ಶ್ರೀಮಧ್ವಾಚಾರ್ಯರ ಬ್ರಹ್ಮಸೂತ್ರಭಾಷ್ಯ :–**

ಸೂತ್ರಾರೂಢವಾದ ಸಿದ್ಧಾಂತಕ್ಕೆ ಮನ್ನಣೆ. ಭಾರತೀಯ ದರ್ಶನಪ್ರಪಂಚದಲ್ಲಿ ಪ್ರತಿಯೊಬ್ಬ ಆಚಾರ್ಯರೂ ಭಗವದ್ಗೀತೆ, ಉಪನಿಷತ್, ಬ್ರಹ್ಮಸೂತ್ರ ಈ ಮೂರು ಪದ್ಧತಿಯಲ್ಲಿ ವಿಭಕ್ತಗಳಾದ ಗ್ರಂಥಗಳ ಮೇಲೆ ಭಾಷ್ಯ ಬರೆಯುವ ಮೂಲಕ ತಮ್ಮ ದರ್ಶನವನ್ನು ಪ್ರಚುರ ಪಡಿಸಬೇಕಿತ್ತು . ಹೀಗಾಗಿ ಈ ಮೂರು ಪದ್ಧತಿಗಳನ್ನು ಪ್ರಸ್ಥಾನತ್ರಯವೆಂದು ಕರೆಯುವ ಸಂಪ್ರದಾಯ ಬಂದಿದೆ.

ಸೂತ್ರ ಪ್ರಸ್ಥಾನಕ್ಕೆ ಆಚಾರ್ಯತ್ರಯರು ಭಾಷ್ಯ ಬರೆದಿದ್ದಾರೆ. ಅವುಗಳಲ್ಲಿ ಶಂಕರ - ರಾಮಾನುಜಭಾಷ್ಯಗಳು ಬಹಳ ವಿಸ್ತಾರವಾಗಿವೆ. ಆದರೆ ಆಚಾರ್ಯ ಮಧ್ವರ ಭಾಷ್ಯ ಸೂತ್ರಪ್ರಾಯವಾಗಿದ್ದರಿಂದ ಟೀಕಾ-ಟಿಪ್ಪಣಿಗಳ ಸಹಾಯವಿಲ್ಲದೇ ಪಂಡಿತಪಾಮರಾದಿಗಳಿಂದ ಅರ್ಥ ಮಾಡಿಕೊಳ್ಳಲು ಅಸಾಧ್ಯವಾಗಿದೆ. ಇದನ್ನೇ ನಾರಾಯಣ ಪಂಡಿತಾಚಾರ್ಯರು ಹೇಳಿದ್ದಾರೆ.

**'ನಾಮಾನಿ ಸರ್ವಾಣಿ ಯಮಾವಿಶಂತಿ ತಂ ವೈ ವಿಷ್ಣುಂ ಪರಮಮುದಾಹರಂತಿ'**

*(ಬ್ರ.ಸೂ.ಭಾ. ಉದಾ : ಭಾಲ್ಲವೇಯಶ್ರುತಿ – 1-1-1)*

ಶ್ರೀಕೃಷ್ಣನೂ ಗೀತೆಯಲ್ಲಿ ಸಕಲವೇದಗಳ ಅರ್ಥ ತಾನೇ ಎಂದು ತಿಳಿಸಿದ್ದಾನೆ – **'ವೇದೈಶ್ಚ ಸರ್ವೈರಹಮೇವ ವೇದ್ಯಃ'** (ಭ.ಗೀ.15-15) ಕಾಠಕೋಪನಿಷತ್ತು ಸಕಲ ವೇದಗಳು ಓಂಕಾರವಾಚ್ಯನಾದ ವಿಷ್ಣುವಿನ ಸ್ವರೂಪವನ್ನು ಪ್ರತಿಪಾದಿಸುತ್ತವೆ ಎಂದು ಹೇಳಿದೆ – **'ಸರ್ವೇ ವೇದಾ ಯತ್ಪದಮಾಮನಂತಿ'** (ಕಠ.2.15).

ಪರಮ ಮುಖ್ಯವೃತ್ತಿಯಿಂದ ಇಂದ್ರಾದಿಶಬ್ದಗಳು ಇಂದ್ರಾದಿದೇವತೆಗಳನ್ನು ಹೇಳುವುದೇ ಇಲ್ಲವೆಂದು ಭಾಲ್ಲವೇಯಶ್ರುತಿ ಹೇಳಿದೆ –

**'ನಾಮಾನಿ ವಿಶ್ವಾಽಭಿ ನ ಸಂತಿ ಲೋಕೇ'**

*(ಬ್ರ.ಸೂ.ಭಾ. ಉದಾ – ಭಾಲ್ಲವೇಯಶ್ರುತಿಃ 1-1-1)*

ಇಂದ್ರಾದಿ ಪದಗಳು ಇಂದ್ರಾದಿದೇವತೆಗಳನ್ನು ಬೋಧಿಸದೇ ವಿಷ್ಣುವನ್ನೇ ಹೇಳುವುದಾದರೆ ಸಮಸ್ತ ಸೂಕ್ತಗಳು ವಿಷ್ಣುಸೂಕ್ತವೆಂದಾಗುತ್ತವೆ . ಹೀಗಾದರೆ ವೇದದಲ್ಲಿ ಇಂದ್ರಸೂಕ್ತ , ಅಗ್ನಿಸೂಕ್ತ , ವಾಯುಸೂಕ್ತ ಮೊದಲಾದ ಸೂಕ್ತಭೇದ ವ್ಯವಸ್ಥೆಯು ಇರದೇ ಹೋಗಬೇಕಾದೀತು ಎಂಬ ಆಕ್ಷೇಪ ಬರಬಹುದು. ಆದರೆ ಇಂದ್ರಾದಿಶಬ್ದಗಳು ಪರಮಮುಖ್ಯವೃತ್ತಿಯಿಂದ ವಿಷ್ಣುವಾಚಕಗಳಾಗಿದ್ದರೂ ಮುಖ್ಯವೃತ್ತಿಯಿಂದ ಇಂದ್ರಾದಿದೇವತೆಗಳನ್ನೂ ಪ್ರತಿಪಾದಿಸುತ್ತವೆ. ಹೀಗಾಗಿ ಇಂದ್ರ ಸೂಕ್ತ - ಅಗ್ನಿಸೂಕ್ತ ಮುಂತಾದ ಸೂಕ್ತವ್ಯವಸ್ಥೆಯು ಸರಿಹೊಂದುತ್ತದೆ . ಇದನ್ನೇ ಪೈಂಗಿಶ್ರುತಿ ಪ್ರಚುರ ಪಡಿಸಿದೆ.

**'ಸರ್ವೋತ್ಕರ್ಷೇ ದೇವದೇವಸ್ಯ ವಿಷ್ಣೋ-**
**ರ್ಮಹಾತಾತ್ಪರ್ಯಂ ನೈವ ಚಾನ್ಯತ್ರ ಸತ್ಯಮ್ ।**
**ಅವಾಂತರಂ ತತ್ಪರತ್ವಂ ತದನ್ಯತ್**
**ಸರ್ವಾಗಮಾನಾಂ ಪುರುಷಾರ್ಥಸ್ತತೋಽತಃ ॥'**

*(ವಿ.ತ. ವಿನಿರ್ಣಯ. ಉದಾಹೃತ . ಪರಿಚ್ಛೇದ - 1)*

ಅಥವಾ ಅಗ್ನಿ ಮುಂತಾದ ದೇವತೆಗಳಲ್ಲಿ ಇರುವ ಅದೇ ಹೆಸರಿನ ಭಗವಂತನ ರೂಪಗಳು ಅಗ್ನಿಸೂಕ್ತ , ಇಂದ್ರಸೂಕ್ತ ಮುಂತಾದ ಸೂಕ್ತಗಳಿಂದ ಪ್ರತಿಪಾದಿತಗಳಾಗಿವೆ. ಹೀಗೆ ಭಗವಂತನದ್ದೇ ಆದ ಅಗ್ನಿ - ಇಂದ್ರಮುಂತಾದ ನಾಮಭೇದದಿಂದ ಅಗ್ನ್ಯಾದಿ ಸೂಕ್ತ ವ್ಯವಸ್ಥೆಯು ವೇದದಲ್ಲಿ ಆಗುತ್ತದೆ .

'ಪೃಥಗ್ ರೂಪಾಣಿ ವಿಷ್ಣೋಸ್ತು ದೇವತಾಂತರಗಾಣಿ ಚ ।
ಅಗ್ನ್ಯಾದಿಸೂಕ್ತವಾಚ್ಯಾನಿ ನಾಮ್ನಾ ಸೂಕ್ತಾಭಿಧಾ ಭವೇತ್ ॥'

*(ಋಗ್ಭಾಷ್ಯಂ - ಅಧ್ಯಾಯ -1)*

ಆದ್ದರಿಂದ ಸರ್ವೋತ್ತಮನಾದ ವಿಷ್ಣುವೇ ಸಮಸ್ತವೇದಗಳಿಂದ ಪ್ರತಿಪಾದ್ಯನೆಂದು ಸಿದ್ಧವಾಗುವುದು.

**ಬ್ರಹ್ಮಸೂತ್ರಗಳ ಮಹತ್ವ :-**

ಹೀಗೆ 'ವಿಷ್ಣುವು ಸಕಲವೇದ ಪ್ರತಿಪಾದ್ಯ ' ಎಂದು ಯಥಾರ್ಥನಿಶ್ಚಯ ಉಂಟಾಗುವುದು ಬ್ರಹ್ಮಸೂತ್ರಗಳ ಸಹಾಯದಿಂದಲೇ. ವೇದವಾಕ್ಯಗಳು ಆಪಾತತಃ ಪರಸ್ಪರ ವಿರುದ್ಧವಾದ ಅರ್ಥವನ್ನು ಕೆಲವುಕಡೆ ಪ್ರತಿಪಾದಿಸುತ್ತಿವೆ . ಕೆಲವು ಕಡೆ ಸಂಶಯ , ಇನ್ನು ಕೆಲವು ಕಡೆ ವಿಪರೀತ ಜ್ಞಾನ ಅವುಗಳಿಂದ ಉಂಟಾಗುವುದರಿಂದ ಅದರ ನಿವಾರಣೆಗಾಗಿ ದ್ವಾಪರಯುಗದ ಅಂತ್ಯಭಾಗದಲ್ಲಿ ಅವತರಿಸಿದ ವೇದವ್ಯಾಸರು ಬ್ರಹ್ಮಸೂತ್ರಗಳನ್ನು ರಚಿಸಿದರು.

ಬ್ರಹ್ಮಸೂತ್ರಗಳು ಶ್ರುತ್ಯರ್ಥನಿರ್ಣಯಿಸಲು ಉಪಯುಕ್ತಗಳಾದ ನ್ಯಾಯಗಳ ನಿಬಂಧನ ರೂಪವಾಗಿರುವುದರಿಂದ ಇವುಗಳ ಸಹಾಯದಿಂದ ವೇದಗಳಿಂದ ಯಥಾರ್ಥಜ್ಞಾನ ಉಂಟಾಗುತ್ತದೆ. ಬ್ರಹ್ಮ ಅಂದರೆ ವೇದ. ತಸ್ಯ ಸೂತ್ರಾಣಿ– ವೇದಾರ್ಥ ನಿರ್ಣಾಯಕ ಸೂತ್ರವಾದ್ದರಿಂದ ಇವು ಬ್ರಹ್ಮಸೂತ್ರಗಳೆನಿಸಿವೆ. ಅಥವಾ ಬ್ರಹ್ಮ ಅಂದರೆ ವೇದಾರ್ಥನಾದ ಪರಬ್ರಹ್ಮ . ಅವನ ಸೂತ್ರಗಳು ಅಂದರೆ ಅವನ ಸ್ವರೂಪ ನಿರ್ಣಯಿಸುವ ಸೂತ್ರಗಳೇ ಬ್ರಹ್ಮಸೂತ್ರಗಳೆನಿಸಿವೆ.

**ಶ್ರೀಮಧ್ವಾಚಾರ್ಯರ ಬ್ರಹ್ಮಸೂತ್ರಭಾಷ್ಯ :–**

ಸೂತ್ರಾರೂಢವಾದ ಸಿದ್ಧಾಂತಕ್ಕೆ ಮನ್ನಣೆ. ಭಾರತೀಯ ದರ್ಶನಪ್ರಪಂಚದಲ್ಲಿ ಪ್ರತಿಯೊಬ್ಬ ಆಚಾರ್ಯರೂ ಭಗವದ್ಗೀತೆ, ಉಪನಿಷತ್, ಬ್ರಹ್ಮಸೂತ್ರ ಈ ಮೂರು ಪದ್ಧತಿಯಲ್ಲಿ ವಿಭಕ್ತಗಳಾದ ಗ್ರಂಥಗಳ ಮೇಲೆ ಭಾಷ್ಯ ಬರೆಯುವ ಮೂಲಕ ತಮ್ಮ ದರ್ಶನವನ್ನು ಪ್ರಚುರ ಪಡಿಸಬೇಕಿತ್ತು . ಹೀಗಾಗಿ ಈ ಮೂರು ಪದ್ಧತಿಗಳನ್ನು ಪ್ರಸ್ಥಾನತ್ರಯವೆಂದು ಕರೆಯುವ ಸಂಪ್ರದಾಯ ಬಂದಿದೆ.

ಸೂತ್ರ ಪ್ರಸ್ಥಾನಕ್ಕೆ ಆಚಾರ್ಯತ್ರಯರು ಭಾಷ್ಯ ಬರೆದಿದ್ದಾರೆ. ಅವುಗಳಲ್ಲಿ ಶಂಕರ – ರಾಮಾನುಜಭಾಷ್ಯಗಳು ಬಹಳ ವಿಸ್ತಾರವಾಗಿವೆ. ಆದರೆ ಆಚಾರ್ಯ ಮಧ್ವರ ಭಾಷ್ಯ ಸೂತ್ರಪ್ರಾಯವಾಗಿದ್ದರಿಂದ ಟೀಕಾ-ಟಿಪ್ಪಣಿಗಳ ಸಹಾಯವಿಲ್ಲದೇ ಪಂಡಿತಪಾಮರಾದಿಗಳಿಂದ ಅರ್ಥ ಮಾಡಿಕೊಳ್ಳಲು ಅಸಾಧ್ಯವಾಗಿದೆ. ಇದನ್ನೇ ನಾರಾಯಣ ಪಂಡಿತಾಚಾರ್ಯರು ಹೇಳಿದ್ದಾರೆ.

**'ನಾಮಾನಿ ಸರ್ವಾಣಿ ಯಮಾವಿಶಂತಿ ತಂ ವೈ ವಿಷ್ಣುಂ ಪರಮಮುದಾಹರಂತಿ'**

*(ಬ್ರ.ಸೂ.ಭಾ. ಉದಾ : ಭಾಲ್ಲವೇಯಶ್ರುತಿ – 1-1-1)*

ಶ್ರೀಕೃಷ್ಣನೂ ಗೀತೆಯಲ್ಲಿ ಸಕಲವೇದಗಳ ಅರ್ಥ ತಾನೇ ಎಂದು ತಿಳಿಸಿದ್ದಾನೆ – **'ವೇದೈಶ್ಚ ಸರ್ವೈರಹಮೇವ ವೇದ್ಯಃ'** (ಭ.ಗೀ.15-15) ಕಾಠಕೋಪನಿಷತ್ತು ಸಕಲ ವೇದಗಳು ಓಂಕಾರವಾಚ್ಯನಾದ ವಿಷ್ಣುವಿನ ಸ್ವರೂಪವನ್ನು ಪ್ರತಿಪಾದಿಸುತ್ತವೆ ಎಂದು ಹೇಳಿದೆ – **'ಸರ್ವೇ ವೇದಾ ಯತ್ಪದಮಾಮನಂತಿ'** (ಕಠ.2.15).

ಪರಮ ಮುಖ್ಯವೃತ್ತಿಯಿಂದ ಇಂದ್ರಾದಿಶಬ್ದಗಳು ಇಂದ್ರಾದಿದೇವತೆಗಳನ್ನು ಹೇಳುವುದೇ ಇಲ್ಲವೆಂದು ಭಾಲ್ಲವೇಯಶ್ರುತಿ ಹೇಳಿದೆ –

**'ನಾಮಾನಿ ವಿಶ್ವಾಽಭಿ ನ ಸಂತಿ ಲೋಕೇ'**

*(ಬ್ರ.ಸೂ.ಭಾ. ಉದಾ – ಭಾಲ್ಲವೇಯಶ್ರುತಿಃ 1-1-1)*

ಇಂದ್ರಾದಿ ಪದಗಳು ಇಂದ್ರಾದಿದೇವತೆಗಳನ್ನು ಬೋಧಿಸದೇ ವಿಷ್ಣುವನ್ನೇ ಹೇಳುವುದಾದರೆ ಸಮಸ್ತ ಸೂಕ್ತಗಳು ವಿಷ್ಣುಸೂಕ್ತವೆಂದಾಗುತ್ತವೆ . ಹೀಗಾದರೆ ವೇದದಲ್ಲಿ ಇಂದ್ರಸೂಕ್ತ , ಅಗ್ನಿಸೂಕ್ತ , ವಾಯುಸೂಕ್ತ ಮೊದಲಾದ ಸೂಕ್ತಭೇದ ವ್ಯವಸ್ಥೆಯು ಇರದೇ ಹೋಗಬೇಕಾದೀತು ಎಂಬ ಆಕ್ಷೇಪ ಬರಬಹುದು. ಆದರೆ ಇಂದ್ರಾದಿಶಬ್ದಗಳು ಪರಮಮುಖ್ಯವೃತ್ತಿಯಿಂದ ವಿಷ್ಣುವಾಚಕಗಳಾಗಿದ್ದರೂ ಮುಖ್ಯವೃತ್ತಿಯಿಂದ ಇಂದ್ರಾದಿದೇವತೆಗಳನ್ನೂ ಪ್ರತಿಪಾದಿಸುತ್ತವೆ. ಹೀಗಾಗಿ ಇಂದ್ರ ಸೂಕ್ತ – ಅಗ್ನಿಸೂಕ್ತ ಮುಂತಾದ ಸೂಕ್ತವ್ಯವಸ್ಥೆಯು ಸರಿಹೊಂದುತ್ತದೆ . ಇದನ್ನೇ ಪೈಂಗಿಶ್ರುತಿ ಪ್ರಚುರ ಪಡಿಸಿದೆ.

**'ಸರ್ವೋತ್ಕರ್ಷೇ ದೇವದೇವಸ್ಯ ವಿಷ್ಣೋ-**
**ರ್ಮಹಾತಾತ್ಪರ್ಯಂ ನೈವ ಚಾನ್ಯತ್ರ ಸತ್ಯಮ್ ।**
**ಅವಾಂತರಂ ತತ್ಪರತ್ವಂ ತದನ್ಯತ್**
**ಸರ್ವಾಗಮಾನಾಂ ಪುರುಷಾರ್ಥಸ್ತತೋಽತಃ ॥'**

*(ವಿ.ತ. ವಿನಿರ್ಣಯ. ಉದಾಹೃತ . ಪರಿಚ್ಛೇದ – 1)*

ಅಥವಾ ಅಗ್ನಿ ಮುಂತಾದ ದೇವತೆಗಳಲ್ಲಿ ಇರುವ ಅದೇ ಹೆಸರಿನ ಭಗವಂತನ ರೂಪಗಳು ಅಗ್ನಿಸೂಕ್ತ , ಇಂದ್ರಸೂಕ್ತ ಮುಂತಾದ ಸೂಕ್ತಗಳಿಂದ ಪ್ರತಿಪಾದಿತಗಳಾಗಿವೆ. ಹೀಗೆ ಭಗವಂತನದ್ದೇ ಆದ ಅಗ್ನಿ – ಇಂದ್ರ ಮುಂತಾದ ನಾಮಭೇದದಿಂದ ಅಗ್ನ್ಯಾದಿ ಸೂಕ್ತ ವ್ಯವಸ್ಥೆಯು ವೇದದಲ್ಲಿ ಆಗುತ್ತದೆ .

'ಪೃಥಗ್ ರೂಪಾಣಿ ವಿಷ್ಣೋಸ್ತು ದೇವತಾಂತರಗಾಣಿ ಚ ।
ಅಗ್ನ್ಯಾದಿಸೂಕ್ತವಾಚ್ಯಾನಿ ನಾಮ್ನಾ ಸೂಕ್ತಾಭಿಧಾ ಭವೇತ್ ॥'

*(ಋಗ್ಭಾಷ್ಯಂ - ಅಧ್ಯಾಯ -1)*

ಆದ್ದರಿಂದ ಸರ್ವೋತ್ತಮನಾದ ವಿಷ್ಣುವೇ ಸಮಸ್ತವೇದಗಳಿಂದ ಪ್ರತಿಪಾದ್ಯನೆಂದು ಸಿದ್ಧವಾಗುವುದು.

**ಬ್ರಹ್ಮಸೂತ್ರಗಳ ಮಹತ್ವ :-**

ಹೀಗೆ 'ವಿಷ್ಣುವು ಸಕಲವೇದ ಪ್ರತಿಪಾದ್ಯ ' ಎಂದು ಯಥಾರ್ಥನಿಶ್ಚಯ ಉಂಟಾಗುವುದು ಬ್ರಹ್ಮಸೂತ್ರಗಳ ಸಹಾಯದಿಂದಲೇ. ವೇದವಾಕ್ಯಗಳು ಆಪಾತತಃ ಪರಸ್ಪರ ವಿರುದ್ಧವಾದ ಅರ್ಥವನ್ನು ಕೆಲವುಕಡೆ ಪ್ರತಿಪಾದಿಸುತ್ತಿವೆ . ಕೆಲವು ಕಡೆ ಸಂಶಯ , ಇನ್ನು ಕೆಲವು ಕಡೆ ವಿಪರೀತ ಜ್ಞಾನ ಅವುಗಳಿಂದ ಉಂಟಾಗುವುದರಿಂದ ಅದರ ನಿವಾರಣೆಗಾಗಿ ದ್ವಾಪರಯುಗದ ಅಂತ್ಯಭಾಗದಲ್ಲಿ ಅವತರಿಸಿದ ವೇದವ್ಯಾಸರು ಬ್ರಹ್ಮಸೂತ್ರಗಳನ್ನು ರಚಿಸಿದರು.

ಬ್ರಹ್ಮಸೂತ್ರಗಳು ಶ್ರುತ್ಯರ್ಥನಿರ್ಣಯಿಸಲು ಉಪಯುಕ್ತಗಳಾದ ನ್ಯಾಯಗಳ ನಿಬಂಧನ ರೂಪವಾಗಿರುವುದರಿಂದ ಇವುಗಳ ಸಹಾಯದಿಂದ ವೇದಗಳಿಂದ ಯಥಾರ್ಥಜ್ಞಾನ ಉಂಟಾಗುತ್ತದೆ. **ಬ್ರಹ್ಮ** ಅಂದರೆ ವೇದ. **ತಸ್ಯ ಸೂತ್ರಾಣಿ**– ವೇದಾರ್ಥ ನಿರ್ಣಾಯಕ ಸೂತ್ರವಾದ್ದರಿಂದ ಇವು ಬ್ರಹ್ಮಸೂತ್ರಗಳೆನಿಸಿವೆ. ಅಥವಾ ಬ್ರಹ್ಮ ಅಂದರೆ ವೇದಾರ್ಥನಾದ ಪರಬ್ರಹ್ಮ . ಅವನ ಸೂತ್ರಗಳು ಅಂದರೆ ಅವನ ಸ್ವರೂಪ ನಿರ್ಣಯಿಸುವ ಸೂತ್ರಗಳೇ ಬ್ರಹ್ಮಸೂತ್ರಗಳೆನಿಸಿವೆ.

**ಶ್ರೀಮಧ್ವಾಚಾರ್ಯರ ಬ್ರಹ್ಮಸೂತ್ರಭಾಷ್ಯ :–**

ಸೂತ್ರಾರೂಢವಾದ ಸಿದ್ಧಾಂತಕ್ಕೆ ಮನ್ನಣೆ. ಭಾರತೀಯ ದರ್ಶನಪ್ರಪಂಚದಲ್ಲಿ ಪ್ರತಿಯೊಬ್ಬ ಆಚಾರ್ಯರೂ ಭಗವದ್ಗೀತೆ, ಉಪನಿಷತ್, ಬ್ರಹ್ಮಸೂತ್ರ ಈ ಮೂರು ಪದ್ಧತಿಯಲ್ಲಿ ವಿಭಕ್ತಗಳಾದ ಗ್ರಂಥಗಳ ಮೇಲೆ ಭಾಷ್ಯ ಬರೆಯುವ ಮೂಲಕ ತಮ್ಮ ದರ್ಶನವನ್ನು ಪ್ರಚುರ ಪಡಿಸಬೇಕಿತ್ತು . ಹೀಗಾಗಿ ಈ ಮೂರು ಪದ್ಧತಿಗಳನ್ನು ಪ್ರಸ್ಥಾನತ್ರಯವೆಂದು ಕರೆಯುವ ಸಂಪ್ರದಾಯ ಬಂದಿದೆ.

ಸೂತ್ರ ಪ್ರಸ್ಥಾನಕ್ಕೆ ಆಚಾರ್ಯತ್ರಯರು ಭಾಷ್ಯ ಬರೆದಿದ್ದಾರೆ. ಅವುಗಳಲ್ಲಿ ಶಂಕರ - ರಾಮಾನುಜಭಾಷ್ಯಗಳು ಬಹಳ ವಿಸ್ತಾರವಾಗಿವೆ. ಆದರೆ ಆಚಾರ್ಯ ಮಧ್ವರ ಭಾಷ್ಯ ಸೂತ್ರಪ್ರಾಯವಾಗಿದ್ದರಿಂದ ಟೀಕಾ-ಟಿಪ್ಪಣಿಗಳ ಸಹಾಯವಿಲ್ಲದೇ ಪಂಡಿತಪಾಮರಾದಿಗಳಿಂದ ಅರ್ಥ ಮಾಡಿಕೊಳ್ಳಲು ಅಸಾಧ್ಯವಾಗಿದೆ. ಇದನ್ನೇ ನಾರಾಯಣ ಪಂಡಿತಾಚಾರ್ಯರು ಹೇಳಿದ್ದಾರೆ.

**'ಬಾಲ ಸಂಘಮಪಿ ಬೋಧಯದ್ ಭೃಶಂ**
**ದುರ್ನಿರೂಪ ವಚನಂ ಚ ಪಂಡಿತೈಃ ।'**

*(ಶ್ರೀಮಧ್ವವಿಜಯ - 9- 10)*

ಆಚಾರ್ಯರ ಬ್ರಹ್ಮಸೂತ್ರಭಾಷ್ಯದ ವೈಶಿಷ್ಟ್ಯವೇನೆಂದರೆ ಅವರು ತಾವು ಹೇಳಿದ ಪ್ರತಿಯೊಂದು ವಿಷಯಕ್ಕೂ ಪ್ರಮಾಣಸಂವಾದ ತೋರಿಸುತ್ತಾರೆ. ಉದಾಹರಣೆಗೆ ಭಾಷ್ಯದ ಪ್ರಾರಂಭದಲ್ಲಿಯೇ, ದ್ವಾಪರಯುಗದಲ್ಲಿ ತತ್ವಜ್ಞಾನ ಹ್ರಾಸಹೊಂದಿದಾಗ ವ್ಯಾಸರು ಅವತರಿಸಿ ವೇದ ವಿಭಾಗಮಾಡಿ ವೇದಾರ್ಥನಿರ್ಣಯಕ್ಕಾಗಿ ಬ್ರಹ್ಮಸೂತ್ರಗಳನ್ನು ರಚಿಸಿದರು - ಎಂದು ಹೇಳಿ ಈ ವಿಷಯದಲ್ಲಿ ಸ್ಕಾಂದಪುರಾಣ ಪ್ರಮಾಣದ ಉಲ್ಲೇಖ ಮಾಡಿದ್ದಾರೆ.

ವಾಸ್ತವಿಕವಾಗಿ ತಾವು ಹೇಳಿದ ವಿಷಯದಲ್ಲಿ ಆಚಾರ್ಯರು ತಾವೇ ಪ್ರಮಾಣ. ಅವರು ಸರ್ವಜ್ಞರಾಗಿದ್ದಾರೆ ಹಾಗು ಮೋಸಮಾಡುವ ಸ್ವಭಾವ ಅವರಿಗಿಲ್ಲ. ಆದರೂ ಆಚಾರ್ಯರು ಪ್ರಮಾಣಸಂವಾದ ತೋರಿಸುವುದು ಹಿರಿಯರು ಅನುಸರಿಸುವ ಮಾರ್ಗ ಪ್ರದರ್ಶನಕ್ಕಾಗಿ - ಎಂದು ತ್ರಿವಿಕ್ರಮ ಪಂಡಿತಾಚಾರ್ಯರು ತತ್ವಪ್ರದೀಪದಲ್ಲಿ ಹೇಳಿದ್ದಾರೆ. '**ಯದ್ಯಪಿ ಆಚಾರ್ಯಃ ಸ್ವೋಕ್ತಾರ್ಥೇ ಸ್ವಯಮೇವ ಪ್ರಮಾಣಂ, ಸರ್ವಜ್ಞತ್ವಾದವಿಪ್ರಲಂಭಕತ್ವಾಚ್ಚ । ತಥಾಪಿ ಸ್ಕಾಂದೇ ಚೋಕ್ತಮಿತಿ ಪ್ರೌಢವಾದಂ ಕರೋತಿ**' ಎಂದು . ಇದು ಆಚಾರ್ಯರ ಔದಾರ್ಯವನ್ನು ತೋರಿಸುತ್ತದೆ.

**ಅಧ್ಯಾಯ ಪಾದಾರ್ಥ :-**

ಬ್ರಹ್ಮಸೂತ್ರಗಳಲ್ಲಿ ಸಮನ್ವಯ, ಅವಿರೋಧ, ಸಾಧನ, ಫಲಗಳೆಂಬ ನಾಲ್ಕು ಅಧ್ಯಾಯಗಳಿದ್ದು ಪ್ರತಿಯೊಂದು ಅಧ್ಯಾಯವು ನಾಲ್ಕು ಪಾದಗಳನ್ನು ಹೊಂದಿದೆ. ಮೊದಲನೆಯ ಸಮನ್ವಯಾಧ್ಯಾಯದ ನಾಲ್ಕು ಪಾದಗಳ ಅರ್ಥವನ್ನು ಆಚಾರ್ಯರು ವಿವರಿಸಿದ ಬಗೆ ಹೀಗಿದೆ.

1. ಅನ್ಯತ್ರ ಪ್ರಸಿದ್ಧ ನಾಮಪಾದ.
2. ಅನ್ಯತ್ರಪ್ರಸಿದ್ಧ ಲಿಂಗಪಾದ,
3. ಉಭಯತ್ರ ಪ್ರಸಿದ್ಧ ನಾಮ-ಲಿಂಗ ಪಾದ.
4. ಅನ್ಯತ್ರೈವ ಪ್ರಸಿದ್ಧ ಶಬ್ದ ಪಾದ.

**ಭಾಷ್ಯದೀಪಿಕಾಕಾರರು - ಶ್ರೀಜಗನ್ನಾಥಯತಿಗಳು :-**

ಶ್ರೀಮಧ್ವಾಚಾರ್ಯರ ಮೂಲಮಹಾಸಂಸ್ಥಾನ, ಶ್ರೀರಾಜೇಂದ್ರತೀರ್ಥರ (ಕ್ರಿ.ಶ. 1444) ಕಾಲದಲ್ಲಿ ಪೂರ್ವಾದಿಮಠವೆಂದು ವ್ಯಾಸರಾಜರ (ಕ್ರಿ.ಶ. 1539) ಅನಂತರ

ಶ್ರೀವ್ಯಾಸರಾಜಮಠವೆಂದು ಕರೆಯಲ್ಪಡುವ ದಿವ್ಯ-ಭವ್ಯ ಪರಂಪರೆಯಲ್ಲಿ ಅನೇಕಾನೇಕ ತಪಸ್ವಿಗಳು ಯತಿವರೇಣ್ಯರು ಈ ಪೀಠವನ್ನು ಅಲಂಕರಿಸಿ ತಮ್ಮದೇ ಆದ ಕೊಡುಗೆಗಳನ್ನು ದ್ವೈತಸಿದ್ಧಾಂತಕ್ಕೆ ನೀಡಿರುವರು.

ಅವರಲ್ಲಿ ವ್ಯಾಸರಾಯರ ಅನಂತರ 10ನೇ ಯತಿವರರಾಗಿ ಪೀಠವನ್ನು ಅಲಂಕರಿಸಿದವರು ಶೇಷಚಂದ್ರಿಕಾಚಾರ್ಯರೆಂದು ಪ್ರಸಿದ್ಧರಾದ ಶ್ರೀರಘುನಾಥತೀರ್ಥರು (ಕ್ರಿ.ಶ. 1700-1755). ಅವರ ಶಿಷ್ಯರೇ ಶ್ರೀಜಗನ್ನಾಥಯತಿಗಳು. ಇವರು ತಮ್ಮ ಗುರುಗಳಾದ ಶ್ರೀರಘುನಾಥತೀರ್ಥರಿಂದ ಉತ್ತರಾಧಿಕಾರಿಯಾಗಿ ಸನ್ಯಾಸ ಸ್ವೀಕಾರ ಮಾಡಿ ಬಹುಕಾಲದ ಅನಂತರ ಪೀಠಾಧಿಪತಿಗಳಾಗಿ (ಕ್ರಿ.ಶ. 1755-1770) ಮಧ್ವಮತ ಪ್ರಚಾರ ಮಾಡಿದರು. ಸಂಪ್ರದಾಯದಲ್ಲಿ ಬಂದ ನಂಬಿಕೆಯಂತೆ ಇವರು ಸರಿಸುಮಾರು 70ವರ್ಷಕ್ಕೂ ಹೆಚ್ಚುಕಾಲ ಬಾಳಿದವರು. ಇವರ ವೃಂದಾವನ ಕುಂಭಕೋಣಕ್ಷೇತ್ರದಲ್ಲಿದೆ.

**ಗ್ರಂಥಗಳು :-**

ಶ್ರೀಜಗನ್ನಾಥಯತಿಗಳು ಮೂರು ಗ್ರಂಥಗಳನ್ನು ರಚಿಸಿದ್ದಾರೆ. ಮೂರನೆಯದಾದ ಋಗ್ಭಾಷ್ಯ ಟೀಕಾಟಿಪ್ಪಣಿ ಇನ್ನೂ ಉಪಲಬ್ಧವಾಗಿಲ್ಲ. ಉಳಿದೆರಡು ಕೃತಿಗಳು ಮುದ್ರಿತವಾಗಿವೆ. ಮೊದಲನೆಯದು ಸೂತ್ರದೀಪಿಕಾ. ಇದು ಚಿಕ್ಕ ಕೃತಿ. ಬ್ರಹ್ಮಸೂತ್ರಗಳಿಗೆ ಬರೆದ ನೇರ ವ್ಯಾಖ್ಯಾನ. ಇಲ್ಲಿ ಮಧ್ವಮತಕ್ಕೆ ಅನುಸಾರವಾಗಿ ಸೂತ್ರಾರ್ಥವನ್ನು ನಿರೂಪಿಸಲಾಗಿದೆ.

ಎರಡನೆಯದು ಪ್ರಕೃತ ಗ್ರಂಥವಾದ ಭಾಷ್ಯದೀಪಿಕಾ. ಇದು ಅರ್ಥದಲ್ಲಿಯೂ ಆಕಾರದಲ್ಲಿಯೂ ಬೃಹತ್ತಾದ ಮೇರುಕೃತಿ. ಮಧ್ವಭಾಷ್ಯದ ಮೇಲೆ ಅವರು ಬರೆದ ವಿಸ್ತಾರವಾದ ವ್ಯಾಖ್ಯಾನ.

**ಭಾಷ್ಯದೀಪಿಕಾದ ವೈಶಿಷ್ಟ್ಯ :-**

1. ಭಾಷ್ಯದ ಪ್ರತಿಯೊಂದು ಪದಗಳ ಹಾಗೂ ವಾಕ್ಯಗಳ ಅರ್ಥವನ್ನು, ಅಭಿಪ್ರಾಯವನ್ನು ಆವಿಷ್ಕರಿಸುವುದು.

2. ತಮಗಿಂತ ಹಿಂದಿನವರು ಸೂತ್ರಗಳಿಗೆ ಮತ್ತು ಭಾಷ್ಯಕ್ಕೆ ಬರೆದಿರುವ ವ್ಯಾಖ್ಯಾನದಲ್ಲಿ ಬರುವ ವಾಕ್ಯಗಳನ್ನು ಉದ್ಧಾರ ಮಾಡಿ ವಿಮರ್ಶಿಸುವುದು, ಶ್ರೀವಾದಿರಾಜರು, ಶ್ರೀರಘೂತ್ತಮರು, ಶ್ರೀರಾಘವೇಂದ್ರತೀರ್ಥರು ಮುಂತಾದ ಪ್ರಸಿದ್ಧ ವ್ಯಕ್ತಿಗಳ ಗ್ರಂಥಗಳ ಉಲ್ಲೇಖ.

3. ವಿಶೇಷವಾಗಿ ಶ್ರೀತ್ರಿವಿಕ್ರಮಪಂಡಿತಾಚಾರ್ಯರ ತತ್ವಪ್ರದೀಪ, ಶ್ರೀಪದ್ಮನಾಭತೀರ್ಥರ ಸತ್ತರ್ಕದೀಪಾವಲಿಯ ವಾಕ್ಯಗಳ ಉದಾಹರಣೆ.

4. ಭಾಷ್ಯದಲ್ಲಿ ಉದಾಹರಿಸಲಾದ ಎಲ್ಲ ಶ್ರುತಿವಾಕ್ಯಗಳ ಸಮಗ್ರ ಅರ್ಥವಿವರಣೆ.

5. ಶ್ರೀಜಯತೀರ್ಥರ ಹಾಗು ಶ್ರೀತ್ರಿವಿಕ್ರಮಪಂಡಿತಾಚಾರ್ಯರ ವ್ಯಾಖ್ಯಾನಗಳಲ್ಲಿ ಆಪಾತತಃ ತೋರಿಬರುವ ವಿರೋಧದ ಪರಿಹಾರ.

6. ಶ್ರುತ್ಯರ್ಥ ವಿವರಣೆಯಲ್ಲಿ ಆಚಾರ್ಯರು ತಮ್ಮ ಬೇರೆ ಬೇರೆ ಭಾಷ್ಯಾದಿಗ್ರಂಥಗಳಲ್ಲಿ ಹೇಳಿರುವ ಅರ್ಥಗಳ ಒಂದೆಡೆ ಕ್ರೋಢೀಕರಣ.

ಈ ಎಲ್ಲ ದೃಷ್ಟಿಯಿಂದ ಶ್ರೀಜಗನ್ನಾಥತೀರ್ಥರ ಭಾಷ್ಯದೀಪಿಕಾ ಕೃತಿಯನ್ನು ಹೊರತು ಪಡಿಸಿದರೆ ಶ್ರೀಮಧ್ವಾಚಾರ್ಯರ ಸೂತ್ರಭಾಷ್ಯದ ಸ್ಪಷ್ಟ ಹಾಗೂ ಪರಿಪೂರ್ಣ ವಿವರಣೆಗಳನ್ನು ಅರಿಯಲು ಉಪಯುಕ್ತವಾದ ಇನ್ನೊಂದು ಗ್ರಂಥ ಜಿಜ್ಞಾಸುಗಳಿಗೆ ಇಂದು ಉಪಲಬ್ಧವಾಗಿಲ್ಲ ಎಂದರೆ ಅತಿಶಯೋಕ್ತಿಯಾಗಲಾರದು.

## ಭಾಷ್ಯದೀಪಿಕಾದಲ್ಲಿ ಬರುವ ಕೆಲವೊಂದು ವಿಚಾರಗಳ ವಿವರಣೆ

### 1. ವೇದ ವಿಭಾಗ :–

ದ್ವಾಪರಯುಗದಲ್ಲಿ ತತ್ವಜ್ಞಾನ ನಶಿಸಿ ಹೋದಾಗ ವ್ಯಾಸರು ಅವತಾರಮಾಡಿ ಅಪಪಾಠಾದಿಗಳಿಂದ ಕಣ್ಮರೆಯಾದ ಶುದ್ಧವೇದ ಭಾಗವನ್ನು ಉಚ್ಚಾರಣೆಯಿಂದ ಅಭಿವ್ಯಕ್ತಗೊಳಿಸಿ ವೇದವಿಭಾಗ ಮಾಡಿದರು.

ಕೃತಯುಗದಲ್ಲಿ ಋಗ್ವೇದ – ಯಜುರ್ವೇದ – ಮುಂತಾದ ವಿಭಾಗಗಳಿಲ್ಲದೆ ವೇದವು ಅಖಂಡವಾಗಿತ್ತು. ಒಟ್ಟಿಗೆ ಸೇರಿರುವ ಈ ವೇದರಾಶಿಯನ್ನೇ 'ಮೂಲವೇದ' ಎಂದು ಕರೆಯಲಾಗಿದೆ. ಮುಂದೆ ತ್ರೇತಾಯುಗದಲ್ಲಿ ಹಯಗ್ರೀವ ರೂಪಿ ಭಗವಂತನಿಂದ ಇದು 'ಋಕ್, ನಿಗದ, ಸಾಮ' ಎಂದು ಮೂರು ರೀತಿಯಾಗಿ ವಿಭಾಗ ಮಾಡಲ್ಪಟ್ಟಿತು. ಇವುಗಳಿಗೆ ಉಪವೇದವೆಂದು ಹೆಸರು. ವೈವಸ್ವತ ಮನ್ವಂತರದಲ್ಲಿ ಚತುರ್ಮುಖ ಬ್ರಹ್ಮನ ಮಗನಾಗಿ ಜನಿಸಿದ ಅಥರ್ವ ಋಷಿಯು ನಿಗದದಲ್ಲಿಯೇ ಸೇರಿಕೊಂಡ ವೇದಭಾಗವನ್ನು ತನ್ನ ಹೆಸರಿನಿಂದ ಕಂಡುಕೊಂಡ. ಈ ವೇದಭಾಗಕ್ಕೆ ಅಥರ್ವವೇದ ಎಂದು ಹೆಸರು. ದ್ವಾಪರಯುಗದ ಕೊನೆಯಲ್ಲಿ ಅವತರಿಸಿದ ವೇದವ್ಯಾಸರು ಈ ನಾಲ್ಕು ವೇದಭಾಗಗಳಿಂದ ಒಂದೊಂದು ಅಂಶಗಳನ್ನು ಸಂಗ್ರಹಿಸಿ ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದ ಎಂದು ನೂತನವಾಗಿ ನಾಲ್ಕು ಪ್ರಕಾರಗಳಿಂದ ವೇದಗಳನ್ನು ವಿಭಾಗ ಮಾಡಿದರು. ಇದೇ ಅವಾಂತರ ವೇದ ಎನಿಸಿತು. ಈ ವಿಷಯವನ್ನು ಋಗ್ಭಾಷ್ಯದಲ್ಲಿ ಆಚಾರ್ಯರು ತಿಳಿಸಿದ್ದಾರೆ –

**'ಋಚಃ ಸ ಋಚ ಉದ್ಧೃತ್ಯ ಋಗ್ವೇದಂ ಕೃತವಾನ್ ಪ್ರಭುಃ ।**
**ಯಜೂಂಷಿ ನಿಗದಾಚ್ಚೈವ ತಥಾ ಸಾಮಾನಿ ಸಾಮತಃ ॥'**

ವೇದವ್ಯಾಸರು ಮತ್ತೆ ಋಗ್ವೇದವನ್ನು24 ಶಾಖೆಗಳನ್ನಾಗಿ, ಯಜುರ್ವೇದವನ್ನು 101 ಶಾಖೆಗಳನ್ನಾಗಿ, ಸಾಮವೇದವನ್ನು 1000 ಶಾಖೆಗಳನ್ನಾಗಿ ಅಥರ್ವವೇದವನ್ನು 12 ಶಾಖೆಗಳನ್ನಾಗಿ ವಿಭಾಗ ಮಾಡಿದರು.

ಈ ಸಂದರ್ಭದಲ್ಲಿ ಜಗನ್ನಾಥಯತಿಗಳು ಭಾಷ್ಯದೀಪಿಕಾದಲ್ಲಿ ಎರಡು ವಿಚಾರಗಳನ್ನು ಪ್ರಸ್ತುತ ಪಡಿಸಿದ್ದಾರೆ. ಮೊದಲನೆಯದಾಗಿ ಪ್ರಕೃತ ದ್ವಾಪರ ಯುಗದಲ್ಲಿ ಉಪವೇದವಿಭಾಗ, ಅವಾಂತರವೇದವಿಭಾಗ, ಶಾಖೋಪಶಾಖೆಯಾಗಿ ವಿಂಗಡನೆ ಮುಂತಾದವುಗಳನ್ನು ಭಾಷ್ಯದಲ್ಲಿ ವಿವರಿಸಿರುವುದು ಆ ಕಾಲದಲ್ಲಿ ತತ್ವಜ್ಞಾನ ಹ್ರಾಸವಾಗಿದೆ – ಎಂಬ ವಿಷಯವನ್ನು ತಿಳಿಸುವುದಕ್ಕಾಗಿ. ದ್ವಾಪರವೆಂದರೆ **'ದ್ವಾವೇವ ಧರ್ಮಪಾದೌ ಯಸ್ಮಿನ್ '**ಎರಡು ಧರ್ಮಪಾದಗಳು ಮಾತ್ರ ಉಳಿದಿರುವ ಯುಗ . ಆದ್ದರಿಂದ ಕಾಲದ ಪ್ರಭಾವದಿಂದ ತತ್ವಜ್ಞಾನ ನಶಿಸಿದೆ. ಹಾಗು ಜನರಿಗೆ ವೇದದ ಆಯಾಯ ಶಾಖೆಯ ಪರಿಜ್ಞಾನವೂ ಇರಲಿಲ್ಲ. ಇದರಿಂದಾಗಿ ಜನರಲ್ಲಿ ವ್ಯಾಕುಲತೆ ಉಂಟಾಗಿತ್ತು . ಇದನ್ನೇ ಭಾಗವತದಲ್ಲಿ ಹೇಳಲಾಗಿದೆ.

**'ಚಕ್ರೇ ವೇದತರೋಃ ಶಾಖಾಃ ದೃಷ್ಟ್ವಾ ಪುಂಸೋऽಲ್ಪಮೇಧಸಃ'**

*(ಭಾಗವತಂ – 1-3-21.)*

ಹೀಗೆ ಆ ಕಾಲದಲ್ಲಿ ಉಂಟಾಗಿದ್ದ ಜನರ ಜ್ಞಾನಹ್ರಾಸವನ್ನು ಪರಿಹರಿಸಲು ವೇದವ್ಯಾಸರು ವೇದವಿಭಾಗ ಮಾಡಿದರು.

ಎರಡನೆಯದಾಗಿ ಆಚಾರ್ಯರು ಅಥರ್ವಣಭಾಷ್ಯದಲ್ಲಿ ಉದಾಹರಿಸಿದ ಸ್ಮೃತಿಯಲ್ಲಿ ವೇದವ್ಯಾಸರು ಮಾಡಿದ ವೇದವಿಭಾಗದ ಪ್ರಕಾರವನ್ನು ವ್ಯತ್ಯಾಸವಾಗಿ ಹೇಳಲಾಗಿದೆ.

**'ಏಕೋ ವೇದಃ ಕೃತೇ ಹ್ಯಾಸೀತ್ ತ್ರೇತಾಯಾಂ ಸ ತ್ರಿಧಾऽಭವತ್ ।**
**ಸ ಏವ ಪಂಚಧಾ ಜಾತೋ ದ್ವಾಪರಂ ಪ್ರಾಪ್ಯ ವೈ ಯುಗಮ್ ।**
**ಉತ್ಸನ್ನಃ ಸ ಕಲಿಂ ಪ್ರಾಪ್ಯ ವೇದಃ ಪ್ರಾಯೇಣ ಸರ್ವಶಃ ॥'**

ಕೃತಯುಗದಲ್ಲಿ ಒಂದೇ ವೇದವಿತ್ತು . ತ್ರೇತಾಯುಗದಲ್ಲಿ ಅದು ಮೂರಾಯಿತು. ದ್ವಾಪರದಲ್ಲಿ ಅದೇ ವೇದ ಐದು ಪ್ರಭೇದಗಳನ್ನು ಪಡೆಯಿತು. ಕಲಿಯುಗದಲ್ಲಿ ವೇದವು ಪೂರ್ಣವಾಗಿ ನಾಶಹೊಂದಿತು ಎಂದು.

ಈ ಸ್ಮೃತಿಯಲ್ಲಿ ವೇದವು ತ್ರೇತಾಯುಗದಲ್ಲಿ ಋಕ್, ನಿಗದ, ಸಾಮ ಎಂಬ ಮೂರು ಪ್ರಕಾರವಾಗಿತ್ತು ಎಂದು ಹೇಳಲ್ಪಾಗಿದೆ. ಆದರೆ ಆಗಲೇ ಅಥರ್ವ ಋಷಿ ಕಂಡುಹಿಡಿದ ಅಥರ್ವವೇದವೂ ಇದ್ದಿತ್ತು . ಹಾಗೆ ದ್ವಾಪರಯುಗದಲ್ಲಿ ವೇದವು ಐದಾಗಿ ಕವಲೊಡೆಯಿತು, ಹಾಗು ವೇದವು ಪೂರ್ಣವಾಗಿ ಕಣ್ಮರೆಯಾಗಿದ್ದು ಕಲಿಯುಗದಲ್ಲೇ ಎಂದು ಹೇಳಲಾಗಿದೆ. ಆದರೆ ಭಾಷ್ಯದಲ್ಲಿ '**ವೇದಂ ಉತ್ಸನ್ನಂ ವ್ಯಂಜಯನ್ ಚತುರ್ಧಾ ವ್ಯಭಜತ್**' ಎಂದು ತ್ರೇತಾಯುಗದಲ್ಲಿ ಋಕ್, ನಿಗದ, ಸಾಮ, ಅಥರ್ವರೂಪದಿಂದ ಹಯಗ್ರೀವ ರೂಪಿ ಭಗವಂತ ವಿಂಗಡಿಸಿದ ವೇದವು ದ್ವಾಪರಯುಗದಲ್ಲಿ ಪೂರ್ಣವಾಗಿ ನಾಶಹೊಂದಿತ್ತು ; ಅದನ್ನು ವೇದವ್ಯಾಸರು ಉಚ್ಚಾರಣೆಯಿಂದ ಅಭಿವ್ಯಕ್ತಗೊಳಿಸಿ ನಾಲ್ಕು ಪ್ರಕಾರಗಳಿಂದ ವಿಭಾಗ ಮಾಡಿದರು ಎಂದು ಹೇಳಲಾಗಿದೆ.

ಹೀಗೆ ಭಾಷ್ಯಕ್ಕೆ ಆಪಾತವಾಗಿ ಮೇಲ್ನೋಟದಿಂದ ಅಥರ್ವಣಭಾಷ್ಯದಲ್ಲಿ ಉದಾಹರಿಸಿದ ಸ್ಮೃತಿ ವಿರೋಧವನ್ನು ಜಗನ್ನಾಥಯತಿಗಳು ತಮ್ಮ ಭಾಷ್ಯದೀಪಿಕೆಯಲ್ಲಿ ಪರಿಹರಿಸಿದ್ದಾರೆ. ತ್ರೇತಾಯುಗದಲ್ಲಿ ಭಗವತ್ಪೂಜಾಸಾಧನವಾದ ವೇದದ ಮೂರು ಪ್ರಕಾರಗಳನ್ನು ಸ್ಮೃತಿಯಲ್ಲಿ ಉಲ್ಲೇಖ ಮಾಡಿದ್ದರೂ ಅಥರ್ವವೇದ ಎಂಬ ನಾಲ್ಕನೇ ಪ್ರಕಾರವನ್ನು ನಿಷೇಧಿಸದಿರುವುದರಿಂದ ಭಾಷ್ಯಕ್ಕೆ ಸ್ಮೃತಿ ವಿರೋಧವಿಲ್ಲ. ಹಾಗೆಯೇ ದ್ವಾಪರದಲ್ಲಿ ಅಪೌರುಷೇಯರೂಪವಾದ ವೇದವು ನಾಲ್ಕು ವಿಧವಾಗಿದ್ದರೂ , ಪೌರುಷೇಯಗಳೆನಿಸಿದ ಇತಿಹಾಸ ಪುರಾಣಾದಿರೂಪವಾದ ಐದನೆಯ ವೇದದ ಪ್ರಕಾರವನ್ನು ಸ್ಮೃತಿಯು ಉಲ್ಲೇಖಿಸಿರುವುದು ಅಸಂಗತವೇನಲ್ಲ. ಮತ್ತು ವೇದವು ಪೂರ್ಣವಾಗಿ ಕಲಿಯುಗದಲ್ಲಿ ನಶಿಸಿದರೂ ವ್ಯಾಸಾವತಾರಕ್ಕಿಂತ ಮೊದಲು ದ್ವಾಪರಯುಗದಲ್ಲಿ ಅಪಪಾಠಾದಿಗಳ ಮೂಲಕ ಸ್ವಲ್ಪಪ್ರಮಾಣದಿಂದ ಹ್ರಾಸವಾಗುವ ಸಂಭವವೂ ಇರುವುದರಿಂದ ಅಥರ್ವಣಭಾಷ್ಯೋಕ್ತ ಸ್ಮೃತಿಯಿಂದ ಪ್ರಕೃತಭಾಷ್ಯದಲ್ಲಿ ಹೇಳಿರುವ ವಿಷಯಕ್ಕೆ ವಿರೋಧವಿಲ್ಲ.

## 2. ಬ್ರಹ್ಮವಿದ್ಯೆಯಲ್ಲಿ ಅಧಿಕಾರ ವಿವೇಚನೆ.

'**ಓಂ ಓಂ ಅಥಾತೋ ಬ್ರಹ್ಮಜಿಜ್ಞಾಸಾ ಓಂ**' ಎಂಬ ಮೊದಲನೆ ಸೂತ್ರಕ್ಕೆ **ಅಥ** = ಅಧಿಕಾರಸಂಪಾದನೆ ಅನಂತರ **ಅತಃ** = ಮೋಕ್ಷರೂಪ ಪ್ರಯೋಜನ ಇರುವುದರಿಂದ **ಬ್ರಹ್ಮಜಿಜ್ಞಾಸಾ** = ಗುಣಪೂರ್ಣನಾದ ವಿಷ್ಣುವಿನ ಶ್ರವಣ ಮನನ ನಿದಿಧ್ಯಾಸನ ರೂಪವಾದ ವಿಚಾರವನ್ನು ಮಾಡಬೇಕು ಎಂದು ಅರ್ಥ.

ಇಲ್ಲಿ ಅಥಶಬ್ದಾರ್ಥದಲ್ಲಿ ಸೇರಿರುವ ಅಧಿಕಾರಯಾವುದು ? ಹಾಗು ಎಷ್ಟು ವಿಧ ? ಎಂಬ ಪ್ರಶ್ನೆ ಬಂದರೆ ಆಚಾರ್ಯರು ಭಾಗವತ ತಂತ್ರ ಪ್ರಮಾಣದ ಮೂಲಕ ವೈದಿಕವಿದ್ಯಾಧಿಕಾರದ ವಿವೇಚನೆ ಮಾಡಿದ್ದಾರೆ.

'ಮಂದ ಮಧ್ಯೋತ್ತಮತ್ವೇನ ತ್ರಿವಿಧಾ ಹ್ಯಧಿಕಾರಿಣಃ ।
ತತ್ರ ಮಂದಾ ಮನುಷ್ಯೇಷು ಯ ಉತ್ತಮಗಣಾ ಮತಾಃ ॥

ಮಧ್ಯಮಾ ಋಷಿಗಂಧರ್ವಾ ದೇವಾಸ್ತತ್ರೋತ್ತಮಾ ಮತಾಃ ।
ಇತಿ ಜಾತಿಕೃತೋ ಭೇದಸ್ತಥಾಽನ್ಯೋ ಗುಣಪೂರ್ವಕಃ ॥

ಭಕ್ತಿಮಾನ್ ಪರಮೋ ವಿಷ್ಣೌ ಯಸ್ತ್ವಧ್ಯಯನವಾನ್ ನರಃ ।
ಅಧಮಃ ಶಮಾದಿ ಸಂಯುಕ್ತೋ ಮಧ್ಯಮಃ ಸಮುದಾಹೃತಃ ॥

ಆಬ್ರಹ್ಮಸ್ತಂಬಪರ್ಯಂತಮಸಾರಂ ಚಾಪ್ಯನಿತ್ಯಕಮ್ ।
ವಿಜ್ಞಾಯ ಜಾತವೈರಾಗ್ಯೋ ವಿಷ್ಣುಪಾದೈಕಸಂಶ್ರಯಃ ।
ಸ ಉತ್ತಮೋಽಧಿಕಾರೀ ಸ್ಯಾತ್ ಸನ್ನ್ಯಸ್ತಾಖಿಲ ಕರ್ಮವಾನ್ ॥'

ಮಂದ, ಮಧ್ಯಮ, ಉತ್ತಮ – ಎಂದು ಅಧಿಕಾರಿಗಳು ಮೂರುವಿಧ. ಅವರಲ್ಲಿ ಮನುಷ್ಯೋತ್ತಮರು ಮಂದಾಧಿಕಾರಿಗಳು. ಋಷಿಗಳು, ಗಂಧರ್ವರು, ಪಿತೃಗಳು, ಚಕ್ರವರ್ತಿಗಳು ಮಧ್ಯಮಾಧಿಕಾರಿಗಳು. ದೇವತೆಗಳು ಬ್ರಹ್ಮವಿದ್ಯಾಧ್ಯಯನಕ್ಕೆ ಉತ್ತಮಾಕಾರಿಗಳು. ಇದು ಮನುಷ್ಯೋತ್ತಮತ್ವ, ಋಷಿತ್ವ, ದೇವತ್ವಾದಿಜಾತಿನಿಮಿತ್ತವಾಗಿ ಅಥವಾ ಕುಲಜನ್ಮನಿಮಿತ್ತವಾಗಿ ಮಾಡಿರುವ ವಿಂಗಡನೆ.

ವಿಷ್ಣುಭಕ್ತಿಪೂರ್ವಕವಾಗಿ ಅಧ್ಯಯನ ಮಾಡುವವನು ಬ್ರಹ್ಮವಿದ್ಯೆಗೆ ಅಧಮಾಧಿಕಾರಿ . ಶಮದಮಾದಿಗಳುಳ್ಳವ ಮಧ್ಯಮಾಧಿಕಾರಿ. ಚತುರ್ಮುಖನಿಂದ ಆರಂಭಿಸಿ ತೃಣಜೀವಿಯವರೆಗೆ ಇರುವ ಜೀವಗಣ ಎಲ್ಲವೂ ಅಸರ್ವೋತ್ತಮ ಹಾಗು ಅವರ ಸ್ಥಾನವಾದ ಸತ್ಯಲೋಕಾದಿಗಳು ಮೋಕ್ಷಸ್ಥಾನಕ್ಕಿಂತ ಅವರ , ಅನಿತ್ಯ ಎಂದು ತಿಳಿಯುವ ಮೂಲಕ ನಿತ್ಯಾನಿತ್ಯ ವಿವೇಕವಿರುವವನು , ವೈರಾಗ್ಯ ಶಾಲಿಯಾಗಿ ವಿಷ್ಣುಪಾದವನ್ನೇ ಯಾರು ಆಶ್ರಯಿಸಿದ್ದಾನೋ ಹಾಗು ಫಲಾಪೇಕ್ಷೆ ಇಲ್ಲದೆ ಕರ್ಮ ಮಾಡಿ ಅವೆಲ್ಲವನ್ನೂ ಭಗವಂತನಲ್ಲಿ ಸಮರ್ಪಿಸಿದ್ದಾನೋ ಅವನು ಉತ್ತಮಾಧಿ ಕಾರಿ ಎನಿಸಿದ್ದಾನೆ.

ಇಲ್ಲಿ ಮೊದಲು ಹೇಳಿದ ದೇವತ್ವಾದಿ ಜಾತಿಪ್ರಧಾನವಾದ ಅಧಿಕಾರವಿಭಾಗವನ್ನು ಹೇಳಿದ ಮೇಲೆ ಗುಣಪೂರ್ವಕವಾದ ಅಧಿಕಾರಿ ಭೇದವನ್ನು ಹೇಳಿದ್ದು ವ್ಯರ್ಥವಲ್ಲವೇ

ಎಂಬ ಆಕ್ಷೇಪಕ್ಕೆ ಜಗನ್ನಾಥ ಯತಿಗಳು ಭಾಷ್ಯದೀಪಿಕಾದಲ್ಲಿ ಹೀಗೆ ಉತ್ತರ ನೀಡಿದ್ದಾರೆ. ಜಾತಿಪ್ರಧಾನವಾದ ಅಧಿಕಾರ ವಿಭಾಗವನ್ನು ಹೇಳಿದಾಗ '**ಮುಕ್ತಿಯೋಗ್ಯತ್ವ**'ವು ಉತ್ತಮ-ಮಧ್ಯಮ-ಅಧಮಾಧಿಕಾರಿಗಳಲ್ಲಿ ಬರುವ ವೈದಿಕ ಬ್ರಹ್ಮವಿದ್ಯಾಧಿಕಾರದ ಸಾಮಾನ್ಯಲಕ್ಷಣವೆಂದು ಹೇಳಿದಂತೆ ಆಗುತ್ತದೆ.

ಆದರೆ ಈ ಲಕ್ಷಣವು ಸಚ್ಛೂದ್ರಾದಿಗಳಲ್ಲಿ ಬರುವುದರಿಂದ ಅತಿವ್ಯಾಪ್ತಿದೋಷ ಉಳ್ಳದ್ದಾಗಿದೆ. ಹಾಗೆ ಅನಧಿಕಾರಿಗಳಾದ (ಅಸಮರ್ಥ-ಅನರ್ಥಿ) ಪಶು ಪಕ್ಷಿ-ಮುಂತಾದವುಗಳಲ್ಲಿಯೂ ಇದೆ. ಅವರಿಗೆ ಬ್ರಾಹ್ಮಣಾದಿ ದೇಹಾಂತರದಲ್ಲಿ ಬ್ರಹ್ಮವಿದ್ಯಾಧಿಕಾರ ಇದ್ದರೂ ಈ ದೇಹದಲ್ಲಿ ಅಧಿಕಾರ ಇಲ್ಲ. ಹಾಗು ದೇಹಾಂತರದಲ್ಲಿ ಇರುವ ಅಧಿಕಾರ ಈ ದೇಹದಲ್ಲಿ ಈ ಕಾಲದಲ್ಲಿ ವೈದಿಕವಿದ್ಯಾಧ್ಯಯನದ ಪ್ರವೃತ್ತಿಗೆ ಅನುಪಯುಕ್ತವಾಗುತ್ತದೆ. ಅದಕ್ಕಾಗಿ ಗುಣಪೂರ್ವಕವಾದ ಅಧಿಕಾರ ನಿರೂಪಣೆಯನ್ನು ಆಚಾರ್ಯರು ಭಾಗವತ ತಂತ್ರಪ್ರಮಾಣದ ಮೂಲಕ ತಿಳಿಸಿ ಕೊಟ್ಟಿದ್ದಾರೆ.

ಜಾತಿಪ್ರಧಾನವಾದ ಅಧಿಕಾರವಿಭಾಗವನ್ನು ಬಿಟ್ಟು ಗುಣಪ್ರಧಾನವಾದ ಅಧಿಕಾರ ನಿರೂಪಿಸಲು ಮತ್ತೊಂದು ಕಾರಣವೂ ಇದೆ. ಶಿವಾರ್ಕಮಣಿದೀಪಿಕಾಕಾರರು ಹೀಗೊಂದು ಆಕ್ಷೇಪಮಾಡಿದ್ದಾರೆ. '**ಮುಕ್ತಿಯೋಗ್ಯತ್ವ**'ವನ್ನೆ ಅಧಿಕಾರಿ ಲಕ್ಷಣವೆಂದು ಹೇಳಬಹುದು. ಅಪಶೂದ್ರಾಧಿಕರಣ (1-3-9 ಸೂತ್ರ 34) ನ್ಯಾಯದಿಂದ ತ್ರೈವರ್ಣಿಕೇತರರಲ್ಲಿ ವೈದಿಕಬ್ರಹ್ಮವಿದ್ಯಾಧ್ಯಯನದ ಅಧಿಕಾರವನ್ನು ವ್ಯಾವೃತ್ತಿಗೊಳಿಸಿ ತ್ರೈವರ್ಣಿಕರಲ್ಲೇ ಅದನ್ನು ಸೀಮಿತಗೊಳಿಸಬಹುದು ಎಂದು.

ಹಾಗು ಪ್ರಥಮಸೂತ್ರದಲ್ಲಿ ಅಥಶಬ್ದ ವ್ಯರ್ಥ. ಸೂತ್ರದಲ್ಲಿರುವ 'ಅತಃ' ಶಬ್ದದಿಂದಲೇ ಮುಮುಕ್ಷುರೂಪ ಅಧಿಕಾರಿಯ ಲಾಭವಾಗುವುದು. ಅಪಶೂದ್ರಾಧಿಕರಣನ್ಯಾಯದಿಂದ ತ್ರೈವರ್ಣಿಕೇತರರನ್ನು ವ್ಯಾವೃತ್ತಿಗೊಳಿಸಬಹುದು. ಹೀಗೆ ಬರುವ ಈ ಎರಡು ಆಕ್ಷೇಪದ ನಿವಾರಣೆಗಾಗಿ ಗುಣಪೂರ್ವಕವಾದ ಅಧಿಕಾರಿವಿಭಾಗವನ್ನು ಹೇಳಿರುವುದು.

**'ಅವೈಷ್ಣವಸ್ಯ ವೇದೇಽಪಿ ಹ್ಯಧಿಕಾರೋ ನ ವಿದ್ಯತೇ ।**
**ಗುರುಭಕ್ತಿವಿಹೀನಸ್ಯ ಶಮಾದಿರಹಿತಸ್ಯ ಚ ॥'**

ತ್ರೈವರ್ಣಿಕರಲ್ಲೆ ವಿಷ್ಣುಭಕ್ತಿ-ಗುರುಭಕ್ತಿ ಇಲ್ಲದಿರುವ, ಶಮದಮಾದಿ ಗುಣ ರಹಿತನಾಗಿರುವ ವ್ಯಕ್ತಿಗೆ ವೈದಿಕ ಬ್ರಹ್ಮವಿದ್ಯಾಧಿಕಾರ ಇಲ್ಲ- ಎಂದು ಪ್ರಮಾಣವಚನವಿದೆ. ಒಂದು ಪಕ್ಷ ಗುಣಪ್ರಧಾನವಾದ ಅಧಿಕಾರ ಭೇದವನ್ನು ನಿರೂಪಿಸದೇ, ಅಪಶೂದ್ರಾಧಿಕರಣ ನ್ಯಾಯದ ಸಹಕಾರದಿಂದ ತ್ರೈವರ್ಣಿಕರಲ್ಲಿ ವೈದಿಕಬ್ರಹ್ಮವಿದ್ಯಾಧಿಕಾರವನ್ನು ಸೀಮಿತಗೊಳಿಸಿದರೂ ಅದು ಸಿದ್ಧಾಂತಾನುಗುಣವಾಗುವುದಿಲ್ಲ.

ತ್ರೈವರ್ಣಿಕರಲ್ಲಿ ವಿಷ್ಣುಭಕ್ತಿ-ಗುರುಭಕ್ತಿ ಇಲ್ಲದಿರುವವರು ಬ್ರಹ್ಮವಿದ್ಯೆಗೆ ಅನಧಿಕಾರಿಗಳಾಗಿದ್ದಾರೆ. ಅವರನ್ನು ವ್ಯಾವೃತ್ತಿಗೊಳಿಸುವುದಕ್ಕಾಗಿ ಗುಣಪ್ರಧಾನವಾದ ಅಧಿಕಾರ ನಿರೂಪಣೆಯನ್ನು ಮಾಡಲಾಗಿದೆ – ಎಂದು ಜಗನ್ನಾಥಯತಿಗಳು ಅಭಿಪ್ರಾಯಪಟ್ಟಿದ್ದಾರೆ —

**'ಅಧ್ಯಯನಲಬ್ಧಾऽಪಿ ವಿಷ್ಣುಭಕ್ತಿಃ ಶಮಾದಿಕಂ ಚಾಭಕ್ತಾನಧಿಕಾರಿಕೃತಾಧ್ಯಯನ ಶಮಾದಿವ್ಯಾವೃತ್ತ್ಯರ್ಥಂ ಪೃಥಗುಕ್ತಮ್'**

ಗುಣಪ್ರಧಾನವಾದ ಅಧಿಕಾರಪ್ರಭೇದವನ್ನು ಹೇಳಿದಾಗ ಅಧಿಕಾರಿ ಸಾಮಾನ್ಯಲಕ್ಷಣವೆನೆಂದು ತಿಳಿಯುವುದಿಲ್ಲ. ಈ ಸಂದರ್ಭದಲ್ಲಿ ಶ್ರೀಜಗನ್ನಾಥಯತಿಗಳು ಅಧಿಕಾರಿಸಾಮಾನ್ಯ ಲಕ್ಷಣವನ್ನು ಹೇಳಿ ಅದನ್ನು ಸಮನ್ವಯಗೊಳಿಸಿದ ಬಗೆ ಅನನ್ಯಸಾಧಾರಣವಾದುದು.

**ಅ.** ಮೇಲೆ ಹೇಳಿದ ಅಧಿಕಾರಿತ್ರಯ ವಿಶೇಷಣಗಳನ್ನೆಲ್ಲ ಒಟ್ಟಿಗೆ ಸೇರಿಸಿದರೆ ಅಧಿಕಾರಿ ಸಾಮಾನ್ಯಲಕ್ಷಣ ಸಿಗುತ್ತದೆ. ಮೂರು ಲಕ್ಷಣಗಳು ಮೂವರಲ್ಲಿ ಸಾಮಾನ್ಯವಾಗಿ ಇರುವುದರಿಂದ ಸಾಮಾನ್ಯಲಕ್ಷಣಕ್ಕೆ ಅಸಂಭವ-ಅವ್ಯಾಪ್ತಿ ದೋಷವಿಲ್ಲ. ಈ ಲಕ್ಷಣವು ಆಯಾಯ ಅಧಿಕಾರಿಗಳಲ್ಲಿ ವಿಶೇಷವಾಗಿ ಇರುವುದರಿಂದ ಅಧಿಕಾರಿಪ್ರಭೇದವನ್ನು ಗುರುತಿಸಬಹುದು. ಇದರ ತಾತ್ಪರ್ಯವನ್ನು ಹೀಗೆ ಅರಿಯಬಹುದು . ವಿಷ್ಣುಭಕ್ತಿಪೂರ್ವಕವಾದ ಶಾಸ್ತ್ರಾಧ್ಯಯನ, ಶಮದಮಾದಿಗುಣಗಳು ಮತ್ತು ವಿಷಯ ವೈರಾಗ್ಯಪೂರ್ವಕವಾದ ವಿಷ್ಣುಪಾದಾಸಕ್ತಿ – ಈ ಮೂರು ಗುಣಗಳು ಮಂದ - ಮಧ್ಯಮ - ಉತ್ತಮ ಎಂಬ ಈ ಮೂವರು ಅಧಿಕಾರಿಗಳಲ್ಲಿ ಸಾಮಾನ್ಯವಾಗಿ ಇರಬೇಕು . ಇವುಗಳಲ್ಲಿ ಹರಿಭಕ್ತಿ ಪುರಸ್ಸರವಾಗಿ ಶಾಸ್ತ್ರಾಧ್ಯಯನ ಪ್ರಧಾನವಾಗಿದ್ದು ಉಳಿದೆರಡು ಅಪ್ರಧಾನವಾಗಿದ್ದರೆ ಅವನು ಅಧಮಾಧಿಕಾರಿ. ಶಮದಮಾದಿಗಳು ಪ್ರಧಾನವಾಗಿದ್ದು, ವಿಷ್ಣು ಭಕ್ತಿಪೂರ್ವಕವಾದ ಅಧ್ಯಯನ ಹಾಗು ವಿಷಯವೈರಾಗ್ಯ ಗೌಣವಾಗಿದ್ದರೆ ಅವನು ಮಧ್ಯಮಾಧಿಕಾರಿ. ಇವೆರಡು ಅಪ್ರಧಾನವಾಗಿದ್ದು ವಿಷಯವೈರಾಗ್ಯ ಹರಿಪಾದಾಸಕ್ತಿಗಳು ಪ್ರಧಾನವಾಗಿದ್ದರೆ ಅವನು ಉತ್ತಮಾಧಿ ಕಾರಿ ಎನಿಸುತ್ತಾನೆ.

**ಆ.** ಅಥವಾ '**ಪ್ರಚುರತಮಾಧ್ಯಯನಾದಿಗುಣತ್ರಯವತ್ತ್ವಂ**' ಉತ್ತಮಾಧಿ ಕಾರಿಯ ಲಕ್ಷಣ. '**ಪ್ರಚುರತರಾಧ್ಯಯನಾದಿ ಗುಣತ್ರಯವತ್ತ್ವಂ**'- ಮಧ್ಯಮಾಧಿ ಕಾರಿಯ ಲಕ್ಷಣ. ' **ಕೇವಲ ಗುಣತ್ರಯವತ್ತ್ವಂ**' ಅಧಮಾಧಿಕಾರಿಯ ಲಕ್ಷಣ. ಮೂರು ಗುಣಗಳು ಸಾಮಾನ್ಯವಾಗಿ ಇರುವವ ಅಧಮಾಧಿಕಾರಿ. ಹೆಚ್ಚಿನ ಮಟ್ಟದಲ್ಲಿರುವವ

ಎಂಬ ಆಕ್ಷೇಪಕ್ಕೆ ಜಗನ್ನಾಥ ಯತಿಗಳು ಭಾಷ್ಯದೀಪಿಕಾದಲ್ಲಿ ಹೀಗೆ ಉತ್ತರ ನೀಡಿದ್ದಾರೆ. ಜಾತಿಪ್ರಧಾನವಾದ ಅಧಿಕಾರ ವಿಭಾಗವನ್ನು ಹೇಳಿದಾಗ '**ಮುಕ್ತಿಯೋಗ್ಯತ್ವ**'ವು ಉತ್ತಮ-ಮಧ್ಯಮ-ಅಧಮಾಧಿಕಾರಿಗಳಲ್ಲಿ ಬರುವ ವೈದಿಕ ಬ್ರಹ್ಮವಿದ್ಯಾಧಿಕಾರದ ಸಾಮಾನ್ಯಲಕ್ಷಣವೆಂದು ಹೇಳಿದಂತೆ ಆಗುತ್ತದೆ.

ಆದರೆ ಈ ಲಕ್ಷಣವು ಸಚ್ಛೂದ್ರಾದಿಗಳಲ್ಲಿ ಬರುವುದರಿಂದ ಅತಿವ್ಯಾಪ್ತಿದೋಷ ಉಳ್ಳದ್ದಾಗಿದೆ. ಹಾಗೆ ಅನಧಿಕಾರಿಗಳಾದ (ಅಸಮರ್ಥ-ಅನರ್ಥಿ) ಪಶು ಪಕ್ಷಿ-ಮುಂತಾದವುಗಳಲ್ಲಿಯೂ ಇದೆ. ಅವರಿಗೆ ಬ್ರಾಹ್ಮಣಾದಿ ದೇಹಾಂತರದಲ್ಲಿ ಬ್ರಹ್ಮವಿದ್ಯಾಧಿಕಾರ ಇದ್ದರೂ ಈ ದೇಹದಲ್ಲಿ ಅಧಿಕಾರ ಇಲ್ಲ. ಹಾಗು ದೇಹಾಂತರದಲ್ಲಿ ಇರುವ ಅಧಿಕಾರ ಈ ದೇಹದಲ್ಲಿ ಈ ಕಾಲದಲ್ಲಿ ವೈದಿಕವಿದ್ಯಾಧ್ಯಯನದ ಪ್ರವೃತ್ತಿಗೆ ಅನುಪಯುಕ್ತವಾಗುತ್ತದೆ. ಆದಕ್ಕಾಗಿ ಗುಣಪೂರ್ವಕವಾದ ಅಧಿಕಾರ ನಿರೂಪಣೆಯನ್ನು ಆಚಾರ್ಯರು ಭಾಗವತ ತಂತ್ರಪ್ರಮಾಣದ ಮೂಲಕ ತಿಳಿಸಿ ಕೊಟ್ಟಿದ್ದಾರೆ.

ಜಾತಿಪ್ರಧಾನವಾದ ಅಧಿಕಾರವಿಭಾಗವನ್ನು ಬಿಟ್ಟು ಗುಣಪ್ರಧಾನವಾದ ಅಧಿಕಾರ ನಿರೂಪಿಸಲು ಮತ್ತೊಂದು ಕಾರಣವೂ ಇದೆ. ಶಿವಾರ್ಕಮಣಿದೀಪಿಕಾಕಾರರು ಹೀಗೊಂದು ಆಕ್ಷೇಪಮಾಡಿದ್ದಾರೆ. '**ಮುಕ್ತಿಯೋಗ್ಯತ್ವ**'ವನ್ನೆ ಅಧಿಕಾರಿ ಲಕ್ಷಣವೆಂದು ಹೇಳಬಹುದು. ಅಪಶೂದ್ರಾಧಿಕರಣ (1-3-9 ಸೂತ್ರ 34) ನ್ಯಾಯದಿಂದ ತ್ರೈವರ್ಣಿಕೇತರರಲ್ಲಿ ವೈದಿಕಬ್ರಹ್ಮವಿದ್ಯಾಧ್ಯಯನದ ಅಧಿಕಾರವನ್ನು ವ್ಯಾವೃತ್ತಿಗೊಳಿಸಿ ತ್ರೈವರ್ಣಿಕರಲ್ಲೇ ಅದನ್ನು ಸೀಮಿತಗೊಳಿಸಬಹುದು ಎಂದು.

ಹಾಗು ಪ್ರಥಮಸೂತ್ರದಲ್ಲಿ ಅಥಶಬ್ದ ವ್ಯರ್ಥ. ಸೂತ್ರದಲ್ಲಿರುವ 'ಅತಃ' ಶಬ್ದದಿಂದಲೇ ಮುಮುಕ್ಷುರೂಪ ಅಧಿಕಾರಿಯ ಲಾಭವಾಗುವುದು. ಅಪಶೂದ್ರಾಧಿಕರಣನ್ಯಾಯದಿಂದ ತ್ರೈವರ್ಣಿಕೇತರರನ್ನು ವ್ಯಾವೃತ್ತಿಗೊಳಿಸಬಹುದು. ಹೀಗೆ ಬರುವ ಈ ಎರಡು ಆಕ್ಷೇಪದ ನಿವಾರಣೆಗಾಗಿ ಗುಣಪೂರ್ವಕವಾದ ಅಧಿಕಾರಿವಿಭಾಗವನ್ನು ಹೇಳಿರುವುದು.

**'ಅವೈಷ್ಣವಸ್ಯ ವೇದೇಽಪಿ ಹ್ಯಧಿಕಾರೋ ನ ವಿದ್ಯತೇ ।**
**ಗುರುಭಕ್ತಿವಿಹೀನಸ್ಯ ಶಮಾದಿರಹಿತಸ್ಯ ಚ ॥'**

ತ್ರೈವರ್ಣಿಕರಲ್ಲೆ ವಿಷ್ಣುಭಕ್ತಿ-ಗುರುಭಕ್ತಿ ಇಲ್ಲದಿರುವ, ಶಮದಮಾದಿ ಗುಣ ರಹಿತನಾಗಿರುವ ವ್ಯಕ್ತಿಗೆ ವೈದಿಕ ಬ್ರಹ್ಮವಿದ್ಯಾಧಿಕಾರ ಇಲ್ಲ- ಎಂದು ಪ್ರಮಾಣವಚನವಿದೆ. ಒಂದು ಪಕ್ಷ ಗುಣಪ್ರಧಾನವಾದ ಅಧಿಕಾರ ಭೇದವನ್ನು ನಿರೂಪಿಸದೇ, ಅಪಶೂದ್ರಾಧಿಕರಣ ನ್ಯಾಯದ ಸಹಕಾರದಿಂದ ತ್ರೈವರ್ಣಿಕರಲ್ಲಿ ವೈದಿಕಬ್ರಹ್ಮವಿದ್ಯಾಧಿಕಾರವನ್ನು ಸೀಮಿತಗೊಳಿಸಿದರೂ ಅದು ಸಿದ್ಧಾಂತಾನುಗುಣವಾಗುವುದಿಲ್ಲ.

ತ್ರೈವರ್ಣಿಕರಲ್ಲಿ ವಿಷ್ಣುಭಕ್ತಿ-ಗುರುಭಕ್ತಿ ಇಲ್ಲದಿರುವವರು ಬ್ರಹ್ಮವಿದ್ಯೆಗೆ ಅನಧಿಕಾರಿಗಳಾಗಿದ್ದಾರೆ. ಅವರನ್ನು ವ್ಯಾವೃತ್ತಿಗೊಳಿಸುವುದಕ್ಕಾಗಿ ಗುಣಪ್ರಧಾನವಾದ ಅಧಿಕಾರ ನಿರೂಪಣೆಯನ್ನು ಮಾಡಲಾಗಿದೆ – ಎಂದು ಜಗನ್ನಾಥಯತಿಗಳು ಅಭಿಪ್ರಾಯಪಟ್ಟಿದ್ದಾರೆ —

**'ಅಧ್ಯಯನಲಬ್ಧಾಽಪಿ ವಿಷ್ಣುಭಕ್ತಿಃ ಶಮಾದಿಕಂ ಚಾಭಕ್ತಾನಧಿಕಾರಿಕೃತಾಧ್ಯಯನ ಶಮಾದಿವ್ಯಾವೃತ್ತ್ಯರ್ಥಂ ಪೃಥಗುಕ್ತಮ್'**

ಗುಣಪ್ರಧಾನವಾದ ಅಧಿಕಾರಪ್ರಭೇದವನ್ನು ಹೇಳಿದಾಗ ಅಧಿಕಾರಿ ಸಾಮಾನ್ಯಲಕ್ಷಣವೇನೆಂದು ತಿಳಿಯುವುದಿಲ್ಲ. ಈ ಸಂದರ್ಭದಲ್ಲಿ ಶ್ರೀಜಗನ್ನಾಥಯತಿಗಳು ಅಧಿಕಾರಿಸಾಮಾನ್ಯ ಲಕ್ಷಣವನ್ನು ಹೇಳಿ ಅದನ್ನು ಸಮನ್ವಯಗೊಳಿಸಿದ ಬಗೆ ಅನನ್ಯಸಾಧಾರಣವಾದುದು.

**ಅ.** ಮೇಲೆ ಹೇಳಿದ ಅಧಿಕಾರಿತ್ರಯ ವಿಶೇಷಣಗಳನ್ನೆಲ್ಲ ಒಟ್ಟಿಗೆ ಸೇರಿಸಿದರೆ ಅಧಿಕಾರಿ ಸಾಮಾನ್ಯಲಕ್ಷಣ ಸಿಗುತ್ತದೆ. ಮೂರು ಲಕ್ಷಣಗಳು ಮೂವರಲ್ಲಿ ಸಾಮಾನ್ಯವಾಗಿ ಇರುವುದರಿಂದ ಸಾಮಾನ್ಯಲಕ್ಷಣಕ್ಕೆ ಅಸಂಭವ-ಅವ್ಯಾಪ್ತಿ ದೋಷವಿಲ್ಲ. ಈ ಲಕ್ಷಣವು ಆಯಾಯ ಅಧಿಕಾರಿಗಳಲ್ಲಿ ವಿಶೇಷವಾಗಿ ಇರುವುದರಿಂದ ಅಧಿಕಾರಿಪ್ರಭೇದವನ್ನು ಗುರುತಿಸಬಹುದು. ಇದರ ತಾತ್ಪರ್ಯವನ್ನು ಹೀಗೆ ಅರಿಯಬಹುದು . ವಿಷ್ಣುಭಕ್ತಿಪೂರ್ವಕವಾದ ಶಾಸ್ತ್ರಾಧ್ಯಯನ, ಶಮದಮಾದಿಗುಣಗಳು ಮತ್ತು ವಿಷಯ ವೈರಾಗ್ಯಪೂರ್ವಕವಾದ ವಿಷ್ಣುಪಾದಾಸಕ್ತಿ – ಈ ಮೂರು ಗುಣಗಳು ಮಂದ – ಮಧ್ಯಮ – ಉತ್ತಮ ಎಂಬ ಈ ಮೂವರು ಅಧಿಕಾರಿಗಳಲ್ಲಿ ಸಾಮಾನ್ಯವಾಗಿ ಇರಬೇಕು . ಇವುಗಳಲ್ಲಿ ಹರಿಭಕ್ತಿ ಪುರಸ್ಸರವಾಗಿ ಶಾಸ್ತ್ರಾಧ್ಯಯನ ಪ್ರಧಾನವಾಗಿದ್ದು ಉಳಿದೆರಡು ಅಪ್ರಧಾನವಾಗಿದ್ದರೆ ಅವನು ಅಧಮಾಧಿಕಾರಿ. ಶಮದಮಾದಿಗಳು ಪ್ರಧಾನವಾಗಿದ್ದು, ವಿಷ್ಣು ಭಕ್ತಿಪೂರ್ವಕವಾದ ಅಧ್ಯಯನ ಹಾಗು ವಿಷಯವೈರಾಗ್ಯ ಗೌಣವಾಗಿದ್ದರೆ ಅವನು ಮಧ್ಯಮಾಧಿಕಾರಿ. ಇವೆರಡು ಅಪ್ರಧಾನವಾಗಿದ್ದು ವಿಷಯವೈರಾಗ್ಯ ಹರಿಪಾದಾಸಕ್ತಿಗಳು ಪ್ರಧಾನವಾಗಿದ್ದರೆ ಅವನು ಉತ್ತಮಾಧಿ ಕಾರಿ ಎನಿಸುತ್ತಾನೆ.

**ಆ.** ಅಥವಾ 'ಪ್ರಚುರತಮಾಧ್ಯಯನಾದಿಗುಣತ್ರಯವತ್ತ್ವಂ' ಉತ್ತಮಾಧಿ ಕಾರಿಯ ಲಕ್ಷಣ. **'ಪ್ರಚುರತರಾಧ್ಯಯನಾದಿ ಗುಣತ್ರಯವತ್ತ್ವಂ'**– ಮಧ್ಯಮಾಧಿ ಕಾರಿಯ ಲಕ್ಷಣ. **' ಕೇವಲ ಗುಣತ್ರಯವತ್ತ್ವಂ'** ಅಧಮಾಧಿಕಾರಿಯ ಲಕ್ಷಣ. ಮೂರು ಗುಣಗಳು ಸಾಮಾನ್ಯವಾಗಿ ಇರುವವ ಅಧಮಾಧಿಕಾರಿ. ಹೆಚ್ಚಿನ ಮಟ್ಟದಲ್ಲಿರುವವ

ಮಧ್ಯಮಾಧಿಕಾರಿ. ಅದಕ್ಕಿಂತಲೂ ಉಚ್ಚಮಟ್ಟದಲ್ಲಿರುವವ ಉತ್ತಮಾಧಿಕಾರಿ ಎನಿಸುತ್ತಾನೆ.

**3. ಶ್ರುತ್ಯರ್ಥ ನಿರೂಪಣೆ –**

ಶ್ರೀಜಗನ್ನಾಥಯತಿಗಳ ಭಾಷ್ಯದೀಪಿಕಾದ ಸಹಾಯವಿಲ್ಲದಿದ್ದರೆ ಭಾಷ್ಯದಲ್ಲಿ ಬರುವ ಶ್ರುತ್ಯರ್ಥವನ್ನು ಪೂರ್ಣವಾಗಿ ತಿಳಿದುಕೊಳ್ಳುವ ಬಗೆ ಗಗನಕುಸುಮದಂತಾಗುತ್ತಿತ್ತು. ಈ ವಿಷಯದಲ್ಲಿ ಶ್ರೀಜಗನ್ನಾಥಯತಿಗಳ ಉಪಕಾರವನ್ನು ಎಷ್ಟು ನೆನೆದರೂ ಅಲ್ಪವೇ. ಶ್ರುತಿಯ ಅರ್ಥವನ್ನು ವಿವರಿಸುವಾಗ ಶ್ರೀಜಗನ್ನಾಥ ಯತಿಗಳು ಕೆಲವೊಂದು ಕಡೆ ಅದರ ಆಕರಗ್ರಂಥವನ್ನು ಉಲ್ಲೇಖಿಸುತ್ತಾರೆ. ಕೆಲವುಕಡೆ ಭಾಷ್ಯದಲ್ಲಿ ಶ್ರುತಿಯ ಅಲ್ಪಭಾಗದ ಉಲ್ಲೇಖ ಮಾತ್ರವಿದ್ದಾಗ ಅದರ ಪೂರ್ಣ ಪಾಠವನ್ನು ನಮಗೆ ಒದಗಿಸಿ ಅದರ ಅರ್ಥವನ್ನು ತಮ್ಮ ಭಾಷ್ಯದೀಪಿಕೆಯಲ್ಲಿ ಉಲ್ಲೇಖಿಸುತ್ತಾರೆ. ಈ ನಿಟ್ಟಿನಲ್ಲಿ ಅವರ ಶ್ರುತ್ಯರ್ಥ ನಿರೂಪಣೆಯ ಚಾತುರ್ಯವನ್ನು ಕೆಳಕಂಡಂತೆ ವಿವರಿಸಬಹುದು.

**ಪರೀಕ್ಷ್ಯ ಲೋಕಾನ್ ಕರ್ಮಚಿತಾನ್ ಬ್ರಾಹ್ಮಣೋ ನಿರ್ವೇದಮಾಯಾತ್ । ನಾಸ್ತ್ಯಕೃತಃ ಕೃತೇನ । ತದ್ವಿಜ್ಞಾನಾರ್ಥಂ ಸ ಗುರುಮೇವಾಭಿಗಚ್ಛೇತ್ ಸಮಿತ್ಪಾಣಿಃ ಶ್ರೋತ್ರಿಯಂ ಬ್ರಹ್ಮನಿಷ್ಠಮ್ ॥**

*(ಮು. ಉ.1-12-12 - ಬ್ರಹ್ಮಸೂತ್ರಭಾಷ್ಯಂ, ಉಪೋದ್ಘಾತಭಾಷ್ಯಮ್)*

ಸಾರಾಸಾರ ನಿತ್ಯಾನಿತ್ಯ ವಿವೇಕ, ವೈರಾಗ್ಯ ಮುಂತಾದವು ವೈದಿಕ ಬ್ರಹ್ಮವಿದ್ಯೆಯಲ್ಲಿ ಅಧಿಕಾರ ಎಂಬ ವಿಷಯದ ಸಮರ್ಥನೆಗಾಗಿ ಈ ಆಥರ್ವಣ ಶ್ರುತಿ ಬಂದಿದೆ ಎನ್ನುತ್ತಾ ಭಾಷ್ಯದೀಪಿಕಾಕಾರರು ಶ್ರುತ್ಯರ್ಥವಿವರಣೆಯನ್ನು ಹೀಗೆ ನೀಡಿದ್ದಾರೆ.

ಬ್ರಹ್ಮಜ್ಞಾನಯೋಗ್ಯನಾದವನು ಸ್ವರ್ಗಾದಿಲೋಕಗಳನ್ನು ಕಾಮ್ಯ ಕರ್ಮಗಳಿಂದ ಲಭ್ಯವಾದವುಗಳಾದ್ದರಿಂದ ನಿಕೃಷ್ಟವಾದವುಗಳು ಹಾಗು ಅನಿತ್ಯವಾದವುಗಳೆಂದು ಬಗೆದು ಕಾಮ್ಯಕರ್ಮಗಳಲ್ಲಿಯೂ ಅವುಗಳ ಫಲವಾದ ಸ್ವರ್ಗಾದಿಗಳಲ್ಲಿಯೂ ವೈರಾಗ್ಯವನ್ನು ತಾಳಬೇಕು. ಏಕೆಂದರೆ ನಿತ್ಯಪುರುಷಾರ್ಥರೂಪವಾದ ಮೋಕ್ಷವು ಕಾಮ್ಯಕರ್ಮಗಳಿಂದ ಸಿಗದು. ಆದ್ದರಿಂದ ಬ್ರಹ್ಮನ ವಿಶೇಷಜ್ಞಾನ ಸಂಪಾದನೆಗಾಗಿ ವಿರಾಗಿಯು ಕೈಯಲ್ಲಿ ಸಮಿಧೆ ಯನ್ನು ಹಿಡಿದು (**ಸಮಿತ್ಪಾಣಿಃ**) ವೇದಾಧ್ಯಯನ ಪೂರ್ವಕವಾಗಿ ಕರ್ಮಾನುಷ್ಠಾನ ಮಾಡುವ ಬ್ರಹ್ಮನಿಷ್ಠನಾದ ಗುರುವಿನ ಬಳಿಗೆ ಹೋಗಬೇಕು. ಈ ಶ್ರುತಿಯನ್ನು ವ್ಯಾಖ್ಯಾನ ಮಾಡುತ್ತಾ ಭಾಷ್ಯದೀಪಿಕಾಚಾರ್ಯರು '**ಸಮಿತ್ಪಾಣಿಃ**' ಎಂಬ ಪದಕ್ಕೆ 'ಕೈಯಲ್ಲಿ ಸಮಿಧೆ ಹಿಡಿದುಕೊಂಡು' ಎಂಬ ಅರ್ಥವನ್ನು ಹೇಳುವುದರ ಜೊತೆಗೆ '**ಸಂಪ್ರಾಪ್ತೌ ಸಂಪುಟೀಕೃತೌ, ಅರಿಕ್ತೌ ವಾ ಪಾಣೀ**

**ಯಸ್ಯ ಸಃ'** – ಕೈಜೋಡಿಸಿಕೊಂಡು, ಅಥವಾ ಕೈಗಳನ್ನು ಖಾಲಿ ಬಿಡದೇ ಗುರುವಿಗೆ ನೀಡಲು ಫಲತಾಂಬೂಲಾದಿಗಳನ್ನು ಹಿಡಿದುಕೊಂಡು ಗುರುವಿನ ಉಪಸತ್ತಿ ಮಾಡಬೇಕು ಎಂಬ ಸಂಪ್ರದಾಯಸಿದ್ಧವಾದ ಅರ್ಥವನ್ನು ಹೇಳಿದ್ದಾರೆ.

ಶ್ರುತಿಯಲ್ಲಿ ವಿಶೇಷಜ್ಞಾನವನ್ನು ತಿಳಿಸುವ ವಿಜ್ಞಾನಪದದಿಂದ ಹಾಗು ಬ್ರಹ್ಮಜ್ಞಾನಿವಾಚಕ ಬ್ರಾಹ್ಮಣ ಶಬ್ದದಿಂದ ಉತ್ತಮಾಧಿಕಾರಿಗಳಾದ ದೇವತೆಗಳ ಲಕ್ಷಣವನ್ನುಹೇಳಲಾಗಿದೆ. ಏಕೆಂದರೆ ದೇವತೆಗಳ ಜ್ಞಾನವೇ ವಿಜ್ಞಾನ, ಬ್ರಹ್ಮಾಪರೋಕ್ಷಜ್ಞಾನ ರಹಿತರು ದೇವತಾಪದವಿಯನ್ನು ಹೊಂದಲಾರರು ಎಂದು ಪ್ರಮಾಣಗಳಿವೆ.

**'ದೇವಾದೀನಾಂ ತು ತಜ್ಜ್ಞಾನಂ ವಿಜ್ಞಾನಮಿತಿ ಕೀರ್ತಿತಮ್'**

*(ಗೀತಾಭಾಷ್ಯ ಉದಾಹೃತ ಪ್ರಮಾಣ ವಚನ - 6-8),*

**'ನೈವ ದೇವಪದಂ ಪ್ರಾಪ್ತಾ ಬ್ರಹ್ಮದರ್ಶನವರ್ಜಿತಾಃ'**

*(ಗೀತಾತಾತ್ಪರ್ಯ ಉದಾಹೃತ ಪ್ರಮಾಣವಚನಮ್)* .

ಈ ರೀತಿಯಾಗಿ ಭಾಷ್ಯದೀಪಿಕಾಕಾರರು ಶ್ರುತ್ಯರ್ಥನಿರೂಪಣೆ ಮಾಡುವಾಗ ಅಲ್ಲಿರುವ ಪದಗಳಿಗೆ ವಿಶೇಷಾರ್ಥಗಳನ್ನು ಹೇಳುತ್ತಾರೆ.

### 4. ಕರ್ಮದಿಂದಾಗುವ ಭಗವತ್ಪ್ರಸಾದ

ಪ್ರಥಮ ಸೂತ್ರದಲ್ಲಿರುವ **'ಅತಃ'** ಶಬ್ದದ ಅರ್ಥವನ್ನು ಭಾಷ್ಯದಲ್ಲಿ ಹೀಗೆ ವಿವರಿಸಲಾಗಿದೆ.

**'ಯತೋ ನಾರಾಯಣಪ್ರಸಾದಮೃತೇ ನ ಮೋಕ್ಷಃ, ನ ಚ ಜ್ಞಾನಂವಿನಾ ಅತ್ಯರ್ಥಪ್ರಸಾದಃ, ಅತೋ ಬ್ರಹ್ಮಜಿಜ್ಞಾಸಾ ಕರ್ತವ್ಯಾ'** – ನಾರಾಯಣನ ಪ್ರಸಾದವಿಲ್ಲದೇ ಮೋಕ್ಷವಿಲ್ಲ . ಅವನ ಅಪರೋಕ್ಷಜ್ಞಾನವಿಲ್ಲವೇ ಅವನ ಅನುಗ್ರಹವಾಗಲಾರದು. ಆದ್ದರಿಂದ ಬ್ರಹ್ಮವಿಚಾರ ಮಾಡಬೇಕು.'

ಪ್ರಕೃತದಲ್ಲಿ ಜ್ಞಾನದಿಂದ ಭಗವತ್ಪ್ರಸಾದ, ಭಗವತ್ಪ್ರಸಾದದಿಂದ ಮೋಕ್ಷ ಎಂದು ಹೇಳಲಾಗಿದೆ . ಆದರೆ **'ತತ್ ಕರ್ಮ ಹರಿತೋಷಂ ಯತ್ '** (ಭಾಗ.4-29-53) ಭಗವಂತನಿಗೆ ಯಾವುದು ಸಂತೋಷವನ್ನು ಉಂಟು ಮಾಡುವುದೋ ಅದು ಕರ್ಮವೆನಿಸುತ್ತದೆ,

**'ಯ ಇದಂ ಪರಮಂ ಗುಹ್ಯಂ ಮದ್ಭಕ್ತೇಷ್ವಭಿಧಾಸ್ಯತಿ ।**
**ಭಕ್ತಿಂ ಮಯಿ ಪರಾಂ ಕೃತ್ವಾ ಮಾಮೇವೈಷ್ಯತ್ಯಸಂಶಯಃ ॥'**

*(ಭ.ಗೀತಾ. 18-62)*

'ಯಾರು ಶ್ರೇಷ್ಠವಾದ ಅತಿಗೋಪ್ಯವಾದ ಈ ಗೀತಾಶಾಸ್ತ್ರವನ್ನು ನನ್ನ ಭಕ್ತರಿಗೆ ಉಪದೇಶಮಾಡುವನೋ ಅವನು ನನ್ನಲ್ಲಿ ಉತ್ತಮವಾದ ಭಕ್ತಿಯನ್ನು ಮಾಡಿ ನನ್ನನ್ನೇ ಹೊಂದುತ್ತಾನೆ. ಈ ವಿಷಯದಲ್ಲಿ ಸಂಶಯವಿಲ್ಲ. ' ಇವೆ ಮುಂತಾದ ಪ್ರಮಾಣಗಳು ಕರ್ಮದಿಂದಲೂ ಭಗವತ್ಪ್ರಸಾದ ಉಂಟಾಗುವುದೆಂದು ತಿಳಿಸುತ್ತಿವೆ. ಆದ್ದರಿಂದ ಭಗವತ್ಪ್ರಸಾದಕ್ಕೆ ಅಪರೋಕ್ಷಜ್ಞಾನದ ಅವಶ್ಯಕತೆ ಇಲ್ಲ. ಅದಕ್ಕಾಗಿ ಬ್ರಹ್ಮವಿಚಾರ ಮಾಡಬೇಕು ಎಂದು ಸೂತ್ರದಲ್ಲಿ ಇರುವ '**ಅತಃ**' ಶಬ್ದದ ಅರ್ಥವು ಸರಿಹೊಂದಲಾರದು ಎಂಬ ಆಕ್ಷೇಪ ಬಂದಾಗ ಆಚಾರ್ಯರು ಭಾಷ್ಯದಲ್ಲಿ ನಾರದೀಯಪುರಾಣ ಪ್ರಮಾಣವನ್ನು ಉಲ್ಲೇಖಿಸುವುದರ ಮೂಲಕ ಅದನ್ನು ಪರಿಹರಿಸಿದ್ದಾರೆ.

**'ಕರ್ಮಣಾ ತ್ವಧಮಃ ಪ್ರೋಕ್ತಃ ಪ್ರಸಾದಃ ಶ್ರವಣಾದಿಭಿಃ ।**
**ಮಧ್ಯಮೋ ಜ್ಞಾನಸಂಪತ್ತ್ಯಾ ಪ್ರಸಾದಸ್ತೂತ್ತಮೋ ಮತಃ ॥**

**ಪ್ರಸಾದಾತ್ ತ್ವಧಮಾದ್ ವಿಷ್ಣೋಃ ಸ್ವರ್ಗಲೋಕಃ ಪ್ರಕೀರ್ತಿತಃ ।**
**ಮಧ್ಯಮಾಜ್ಜನಲೋಕಾದಿರುತ್ತಮಸ್ತ್ವೇವ ಮುಕ್ತಿದಃ ॥'**

ಕಾಮ್ಯಾಕಾಮ್ಯ ಉಭಯ ಕರ್ಮಾಚರಣೆಯಿಂದ ಉಂಟಾಗುವ ಭಗವತ್ತುಷ್ಟಿ '**ಅಧಮ**' ಎನಿಸಿದೆ. ಶ್ರವಣ, ಮನನ, ನಿದಿಧ್ಯಾಸನಗಳಿಂದ ಉಂಟಾಗುದ ಭಗವತ್ಪ್ರಸಾದ **ಮಧ್ಯಮ**. ಅಪರೋಕ್ಷಜ್ಞಾನದಿಂದಾಗುವ ಪ್ರಸಾದ **ಉತ್ತಮ**ವಾದುದು. ಅಧಮ-ಪ್ರಸಾದದಿಂದ ಸ್ವರ್ಗಲೋಕವು, ಮಧ್ಯಮಪ್ರಸಾದದಿಂದ ಜನೋಲೋಕ, ತಪೋಲೋಕ, ಸತ್ಯಲೋಕಗಳೂ ಸಿಗುತ್ತವೆ. ಉತ್ತಮಪ್ರಸಾದವು ಮಾತ್ರ ಮೋಕ್ಷವನ್ನು ಕೊಡಬಲ್ಲದು.

ಈ ಸಂದರ್ಭದಲ್ಲಿ ಭಾಷ್ಯದೀಪಿಕಾಚಾರ್ಯರು ಕರ್ಮದಿಂದಾಗುವ ಪ್ರಸಾದವನ್ನು ವಿಶ್ಲೇಷಿಸುತ್ತಾರೆ. ಕಾಮ್ಯಕರ್ಮದಿಂದಾಗುವ ಭಗವತ್ಪ್ರಸಾದವು ಸ್ವರ್ಗಲೋಕಕ್ಕೆ ಕಾರಣವಾಗುವಂತೆ ಕಾಮ್ಯಕರ್ಮಗಳು ವೈರಾಗ್ಯ ಹುಟ್ಟಿಸುವ ಮೂಲಕ ಮೋಕ್ಷಪ್ರಾಪ್ತಿಗೂ ಉಪಯುಕ್ತವಾಗಿವೆ . ಹಾಗೆ ನಿಷ್ಕಾಮ ಕರ್ಮದಿಂದ ಉಂಟಾಗುವ ಅಧಮ ಪ್ರಸಾದದಿಂದ ಅಂತಃಕರಣಶುದ್ಧಿ ಆಗುವ ಮೂಲಕ ಮೋಕ್ಷವೂ ಆಗುತ್ತದೆ. ಒಟ್ಟಾರೆ ನಾರದೀಯ ಪ್ರಮಾಣವಾಕ್ಯದಲ್ಲಿ ಅಧಮಭಗವತ್ಪ್ರಸಾದದಿಂದ ಸ್ವರ್ಗಲೋಕದ ಪ್ರಾಪ್ತಿಯಾಗುವುದೆಂದು ತಿಳಿಸಲಾಗಿದೆ. ಆದರೆ ಭಗವದ್ದ್ವೇಷಿಗಳಾದ ದುರ್ಯೋಧನಾದಿಗಳಿಗೆ ಅಧಮ ಭಗವತ್ಪ್ರಸಾದವು ಇಲ್ಲದಿದ್ದರೂ ಮರಣವಾದ ಮೇಲೆ ಸ್ವರ್ಗಲೋಕ ಪ್ರಾಪ್ತಿ ಹೇಗೆ ಆಯಿತು ? ದುರ್ಯೋಧನಾದಿಗಳಿಗೆ ಮರಣವಾದ ಮೇಲೆ ಸ್ವರ್ಗಪ್ರಾಪ್ತಿಯಾಗಿರುವುದಾಗಿ ಮಹಾಭಾರತದಲ್ಲಿ ಹೇಳಲಾಗಿದೆ [9]. ಸಶರೀರನಾಗಿ ಸ್ವರ್ಗಕ್ಕೆ ಹೋದ ಯುಧಿಷ್ಠಿರ ಸ್ವರ್ಗದಲ್ಲಿ ದುರ್ಯೋಧನಾದಿಗಳನ್ನು

ನೋಡಿದ ಎಂದಿದೆ.

ಇದು ಹೇಗೆ ಸಂಗತವಾಗುತ್ತದೆ ಎಂದು ಭಾಷ್ಯದೀಪಿಕಾದಲ್ಲಿ ಪ್ರಶ್ನೆಮಾಡಿ ಸಮಾಧಾನಿಸಲಾಗಿದೆ. ಶ್ರೀಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿ ದೇವೇಂದ್ರ ಸಶರೀರವಾಗಿ ಸ್ವರ್ಗ ಪ್ರವೇಶಿಸಿದ ಯುಧಿಷ್ಠಿರನನ್ನು ಕರೆದೊಯ್ದದ್ದು ಸ್ವರ್ಗಲೋಕದ ಅನಂತರ ಬರುವ ತನ್ನ ಲೀಲೆಗಾಗಿ ಇಂದ್ರ ನಿರ್ಮಿಸಿದ್ದ ಸಾಂಕಲ್ಪಿಕ ಸ್ವರ್ಗದ ಇಂದ್ರ ಭವನಕ್ಕೆ. ಯುಧಿಷ್ಠಿರ ದುರ್ಯೋಧನಾದಿಗಳನ್ನು ನೋಡಿದ್ದು ಸ್ವರ್ಗದಲ್ಲಿ ಅಲ್ಲ; ಸಾಂಕಲ್ಪಿಕ ಸ್ವರ್ಗದಲ್ಲಿ ಎಂದು ತಾತ್ಪರ್ಯ ನಿರ್ಣಯದಲ್ಲಿ ಹೇಳಲಾಗಿದೆ.

**'ಸರ್ವೇಷಾಮುತ್ತರಂ ಲೋಕಮೈಂದ್ರಂ ಪ್ರಾಪ್ಯೇದಮೇವ ತೇ ।**
**ಸ್ಥಾನಮಿತ್ಯುದಿತೋ ದೇವೈರ್ದುರ್ಯೋಧನಮವೈಕ್ಷತ ॥ '**

*(ಮ.ಭಾ.ತಾತ್ಪರ್ಯನಿರ್ಣಯ. ಅಧ್ಯಾಯ. 32. ಶ್ಲೋಕ-91)*

ದುರ್ಯೋಧನ ಮುಂತಾದ ಅಸುರರಿಗೆ ಯಾಗ ಮಾಡಿಸಿದ ಋಷಿ ಮುನಿಗಳ ಪ್ರಭಾವದಿಂದ ಸಾಂಕಲ್ಪಿಕಸ್ವರ್ಗದ ಪ್ರಾಪ್ತಿಯಾಗಿದ್ದರೂ ಸ್ವಲ್ಪ ಕಾಲ ಮಾತ್ರ ಅವರು ಅಲ್ಲಿ ಇದ್ದು ಮುಂದೆ ಕೂಡಲೇ ಅಂಧಂತಮಸ್ಸನ್ನು ಹೊಂದುತ್ತಾರೆ. ಆದರೆ ಉಳಿದ ಅಸುರರಿಗೆ ಭಾಗವತಾಚಾರ್ಯರಾದ ಋಷಿಮುನಿಗಳ ಆಶೀರ್ವಾದ ಇಲ್ಲದಿರುವುದರಿಂದ ಈ ಸ್ವರ್ಗವೂ ಇಲ್ಲ.

ಇಲ್ಲಿ ದುರ್ಯೋಧನ ಮುಂತಾದವರು ಹೊಂದಿದ ಸಾಂಕಲ್ಪಿಕ ಸ್ವರ್ಗವೆಂದರೆ ಸ್ವರ್ಗಸಮೀಪದ ಪ್ರದೇಶವೇ ಹೊರತು ಸ್ವರ್ಗವಲ್ಲ. ಏಕೆಂದರೆ ಬಹಳವಾಗಿ ಶ್ರೀಕೃಷ್ಣನ ದ್ವೇಷಮಾಡಿದ ದುರ್ಯೋಧನಾದಿಗಳಿಗೆ ಸಾಕ್ಷಾತ್ ಸ್ವರ್ಗವಿಲ್ಲ. ಅವರು ಹೊಂದಿದ ಸ್ವರ್ಗವೆಂದರೆ ಸ್ವರ್ಗದಿಂದ ಕೆಳಗೆ ಸ್ವರ್ಗಕ್ಕೆ ಅಯೋಗ್ಯರಾದ ಅಸುರ ಮುಂತಾದವರಿಗೆಂದೇ ನಿರ್ಮಿತವಾದ ಉಪಸ್ವರ್ಗ. ಇದನ್ನೇ ಆಚಾರ್ಯರು ಗೀತಾತಾತ್ಪರ್ಯದಲ್ಲಿ – **'ಮೋಕ್ಷಃ ಸಾಂಕಲ್ಪಿಕಃ ಸ್ವರ್ಗಃ ಭೂತಾದಿತ್ವಂ ಫಲಂ ಕ್ರಮಾತ್'** ಎಂದು ತಿಳಿಸಿದ್ದಾರೆ. ಈ ಸ್ವರ್ಗವನ್ನೆ ನಿತ್ಯಸಂಸಾರಿಗಳಾದ ರಾಜಸ-ರಾಜಸರು , ರಾಜಸತಾಮಸರು ಪಡೆಯುವರು. ಈ ಸಾಂಕಲ್ಪಿಕ ಸ್ವರ್ಗವು ಸಾಮಾನ್ಯಸ್ವರ್ಗಕ್ಕೆ ಸದೃಶವಾಗಿದ್ದು ಭಾಗವತಾಚಾರ್ಯ ಪ್ರಭಾವದಿಂದ ಸ್ವರ್ಗಕ್ಕೆ ಬರುವ ದುರ್ಯೋಧನ ಮುಂತಾದ ದೈತ್ಯಶ್ರೇಷ್ಠರಿಗೆಂದೇ ನಿರ್ಮಿತವಾದದ್ದಾಗಿದೆ.

೧. **ಸ್ವರ್ಗಂ ತ್ರಿವಿಷ್ಟಪಂ ಪ್ರಾಪ್ಯ ಧರ್ಮರಾಜೋ ಯುಧಿಷ್ಠಿರಃ ।**
**ದುರ್ಯೋಧನಂ ಶ್ರಿಯಾ ಜುಷ್ಟಂ ದದರ್ಶಾಽಸೀನಮಾಸನೇ ॥**
**ಭ್ರಾಜಮಾನಮಿವಾದಿತ್ಯಂ ಧೀರಲಕ್ಷ್ಮ್ಯಾಽಭಿ ಸಂವೃತಮ್ ।**
**ದೇವೈರ್ಭ್ರಾಜಿಷ್ಣುಭಿಃ ಸಾಧ್ಯೈಃ ಸಹಿತಂ ಪುಣ್ಯಕರ್ಮಭಿಃ ॥** *(ಮ.ಭಾ.– 18.1.4,5)*

ಆದರೆ ಪ್ರಕೃತ ಅಧಮ ಭಗವತ್ಪ್ರಸಾದದಿಂದ ಪ್ರಾಪ್ಯವಾದ ಸ್ವರ್ಗವು ಭೂಃ, ಭುವಃ, ಸ್ವಃ, ಮುಂತಾದ ಸಪ್ತಲೋಕದಲ್ಲಿ ಸೇರಿರುವ ರಾಜಸಸಾತ್ವಿಕರು ಪಡೆಯುವ ಸ್ವರ್ಗಲೋಕವೆಂದು ತಿಳಿಯಬೇಕು. ಅದನ್ನೇ ಪ್ರಕೃತ ಪ್ರಮಾಣವಚನದಲ್ಲಿ ಹೇಳಲಾಗಿದೆ ಎಂದು ಭಾಷ್ಯದೀಪಿಕಾದಲ್ಲಿ ವಿವರಿಸಲಾಗಿದೆ.

ಹೀಗೆ ಭಾಷ್ಯದೀಪಿಕಾದಲ್ಲಿ ಪುಟಪುಟಗಳಲ್ಲಿ, ವಾಕ್ಯವಾಕ್ಯಗಳಲ್ಲಿ ಪದಪದಗಳಲ್ಲಿ ವಿಶಿಷ್ಟವಿಚಾರಗಳನ್ನು ಕಾಣಬಹುದು. ವಿಸ್ತಾರಭಯದಿಂದ ಒಂದೆರಡನ್ನು ಮಾತ್ರ ಇಲ್ಲಿ ಕೊಡಲಾಗಿದೆ.

## ಕೃತಜ್ಞತಾಸಮರ್ಪಣೆ

ಪರಮಪೂಜ್ಯ ಗುರುಗಳಾದ **ಶ್ರೀಶ್ರೀವಿಶ್ವೇಶತೀರ್ಥ ಶ್ರೀಚರಣರ ಪಾದಾರವಿಂದಗಳಲ್ಲಿ** ಭಕ್ತಿಪೂರ್ವಕ ಸಾಷ್ಟಾಂಗ ಪ್ರಣಾಮಗಳನ್ನು ಸಮರ್ಪಿಸುವೆ. ಶ್ರೀಶ್ರೀಪಾದಂಗಳವರು ಅನ್ನದಾನ-ವಿದ್ಯಾದಾನಾದಿಗಳನ್ನು ಮಾಡಿ ನಮ್ಮಸ್ವರೂಪೋದ್ಧಾರ ಮಾಡಿದ ಪರಮಮಹನೀಯರು.

ಈ ಪುಸ್ತಕದ ಮುದ್ರಣವೆಚ್ಚ ಭರಿಸಲು ಉದಾರ ಮನಸ್ಸಿನಿಂದ ಸಹಕರಿಸಿದ ರಾಷ್ಟ್ರೀಯ ಸಂಸ್ಕೃತಸಂಸ್ಥಾನದ ಕುಲಪತಿಗಳಾದ **ಪ್ರೊ. ವೆಂ. ಕುಟುಂಬಶಾಸ್ತ್ರಿಗಳಿಗೆ** ಋಣಿಯಾಗಿದ್ದೇನೆ.

ಅಮೂಲ್ಯ ಸಲಹೆ ನೀಡಿ ಮಾರ್ಗದರ್ಶನ ಮಾಡಿದ ತಿರುಪತಿ ರಾಷ್ಟ್ರಿಯ ಸಂಸ್ಕೃತ ವಿದ್ಯಾಪೀಠದ ವಿಶ್ರಾಂತ ಕುಲಪತಿಗಳು ಪೂರ್ಣಪ್ರಜ್ಞ ಸಂಶೋಧನ ಮಂದಿರದ ಅಧ್ಯಕ್ಷರೂ ಆದ ಪ್ರೊ. ಡಿ. ಪ್ರಹ್ಲಾದಾಚಾರ್ಯರಿಗೆ ಆದರದ ಕೃತಜ್ಞತೆಗಳು.

ಈ ಗ್ರಂಥದ ಸಂಪಾದನೆಯಲ್ಲಿ ತೊಡಗಿಸಿ ಅದರ ಪ್ರಕಾಶನಕ್ಕೆ ಬೇಕಾದ ಬಾಹ್ಯವಿತ್ತವನ್ನು ವ್ಯವಸ್ಥಾಪನೆ ಮಾಡಿ ಮಾರ್ಗದರ್ಶನ ಮಾಡಿದ ಪೂರ್ಣಪ್ರಜ್ಞ ಸಂಶೋಧನ ಮಂದಿರದ ನಿರ್ದೇಶಕರಾದ **ಡಾ. ಎ.ವಿ. ನಾಗಸಂಪಿಗೆಯವರಿಗೆ** ಹಾರ್ದಿಕವಾದ ಕೃತಜ್ಞತೆಗಳನ್ನು ವ್ಯಕ್ತಪಡಿಸುತ್ತೇನೆ.

ಹಾಗೆಯೇ ಗ್ರಂಥಸಂಶೋಧನೆಗೆ ಉಪಯುಕ್ತ ಸಲಹೆನೀಡಿ ಉಪಕರಿಸಿದ ವಿದ್ಯಾಪೀಠದ ನಿವೃತ್ತ ಅಲಂಕಾರ ಪ್ರಾಧ್ಯಾಪಕರಾದ ಎ.ಅನಂತತಂತ್ರಿಗಳಿಗೆ ಹೃತ್ಪೂರ್ವಕ ಕತಜ್ಞತೆಗಳು.

ಸಂಶೋಧನ ಮಂದಿರದ ಉಪನಿರ್ದೇಶಕರಾದ ಶ್ರೀರಂಗನಾಥ ಕಟ್ಟಿಯವರಿಗೆ ಹಾಗು ಎಲ್ಲಾ ಹಿರಿಯ ವಿದ್ವಾಂಸರಿಗೂ ಕೃತಜ್ಞತೆಯನ್ನು ಸಲ್ಲಿಸುತ್ತೇನೆ.

ಉಪೋದ್ಘಾತದ ಭಾಗವನ್ನು ಇಂಗ್ಲೀಷ್‌ಭಾಷೆಗೆ ತರ್ಜುಮೆ ಮಾಡಿದ ಪಂ. ಯು. ಬಿ. ಗುರುರಾಜಾಚಾರ್ಯರಿಗೆ ಹಾರ್ದಿಕ ಕೃತಜ್ಞತೆಗಳು.

'ಸೂತ್ರದೀಪಿಕಾ'ದ ಶುದ್ಧಪ್ರತಿಯನ್ನು ನೀಡಿ ಸಹಕರಿಸಿದ ವಿದ್ವಾನ್.ಕಡ್ಡಿ ಬದರೀನಾರಾಯಣಾಚಾರ್ಯರಿಗೆ, ಪುಟವಿನ್ಯಾಸ ಮಾಡಿದ ಪಂ.ಪ್ರದೀಪಸಿಂಹ ಇವರಿಗೂ ಹೃತ್ಪೂರ್ವಕ ಕೃತಜ್ಞತೆಗಳು.

ಕರಡಚ್ಚು ತಿದ್ದುವಲ್ಲಿ ಸಹಕರಿಸಿದ ಯುವ ವಿದ್ವಾಂಸರಾದ ಭೀಮಸೇನ ಹಾಗೂ ರಾಮಚಂದ್ರ ಇವರಿಬ್ಬರೂ ಅಭಿನಂದನೆಗೆ ಅರ್ಹರಾಗಿದ್ದಾರೆ.

ಇತಿ ಸುಜನ ವಿಧೇಯ,

**ಪಂ. ಶಂಕರನಾರಾಯಣ ಅಡಿಗ. ಕೆ.**

## ಪ್ರಕೃತ ಮುದ್ರಣದ ಬಗೆಗೆ :-

ಈ ಭಾಷ್ಯದೀಪಿಕಾ ಗ್ರಂಥವು ಕ್ರಿ.ಶ. 1964ನೇ ಇಸ್ವಿಯಲ್ಲಿ ಬೆಂಗಳೂರಿನ ಶ್ರೀವ್ಯಾಸರಾಜ ಮಠಾಧೀಶರಾದ ಶ್ರೀಶ್ರೀವಿದ್ಯಾಪ್ರಸನ್ನತೀರ್ಥಶ್ರೀಪಾದರ ಆಜ್ಞಾನುಸಾರವಾಗಿ ಶ್ರೇಷ್ಠ ಪಂಡಿತರಾದ ಮಾಗಡಿ ಶ್ರೀರಂಗನಾಥಾಚಾರ್ಯರಿಂದ ಸಂಪಾದಿಸಲ್ಪಟ್ಟು ಶ್ರೀ ಡಿ.ಎಸ್. ಕೃಷ್ಣಾಚಾರ್ಯರಿಂದ ಮುದ್ರಿಸಲ್ಪಟ್ಟಿತ್ತು. ಅವರು ಮಾಡಿದ ಉಪಕಾರವನ್ನು, ಪಟ್ಟ ಶ್ರಮವನ್ನು ಜಿಜ್ಞಾಸುಗಳು ಮರೆಯುವಂತಿಲ್ಲ. ಯಾವ ಸೌಲಭ್ಯವೂ ಇಲ್ಲದ ಆಕಾಲದಲ್ಲಿ ಸಿಕ್ಕ ಕೆಲವೇ ಹಸ್ತಪ್ರತಿಗಳು ಹಾಗು ಪಂಡಿತರ ಸಹಾಯದಿಂದ ಇವರು ಮಾಡಿದ ಉಪಕಾರಕ್ಕೆ ನಾವೆಲ್ಲ ಇಂದು ಆದರ ಪೂರ್ವಕವಾಗಿ ಕೃತಜ್ಞತೆಯನ್ನು ವ್ಯಕ್ತಪಡಿಸುತ್ತಿದ್ದೇವೆ.

ಪ್ರಕೃತ ಈ ಕೃತಿಯ ಮುದ್ರಣಕ್ಕೆ ಸಿಕ್ಕಿದ ನಾಲ್ಕು ಹಸ್ತ ಪ್ರತಿಗಳನ್ನು ಉಪಯೋಗಿಸಿ-ಕೊಂಡು ಹೆಚ್ಚಿನ ಶುದ್ಧ ಪಾಠವನ್ನು ನೀಡಲು ಇಲ್ಲಿ ಪ್ರಯತ್ನ ಮಾಡಲಾಗಿದೆ. ನಾಲ್ಕು ಹಸ್ತಪ್ರತಿಗಳ ಸಹಾಯದಿಂದ ಹಿಂದಿನ ಮುದ್ರಿತಪಾಠಗಳನ್ನು ತುಲನೆ ಮಾಡಿ ಹಲವಾರು ಪಾಠಾಂತರಗಳನ್ನು ಇಲ್ಲಿ ನೀಡಲಾಗಿದೆ. ಮುದ್ರಿತ ಪಾಠದಲ್ಲಿ ಲುಪ್ತಗಳಾದ ಹಲವಾರು ವಾಕ್ಯಗಳು ಹಸ್ತಪ್ರತಿಗಳಲ್ಲಿ ಕಂಡುಬಂದಿರುವುದರಿಂದ ಅವುಗಳನ್ನು ಕೆಳಗೆ ಅವಗಾಹನೆಗಾಗಿ ನೀಡಲಾಗಿದೆ. ಈ ಪ್ರಯತ್ನವನ್ನು ವಿದ್ವಾಂಸರು ವಾತ್ಸಲ್ಯ ಪೂರಿತ ದೃಷ್ಟಿಯಿಂದ ಕಂಡು ಹರಿಸಬೇಕೆಂದು ವಿನಂತಿ.

ಧಾರವಾಡದ **ಪಂ.ಶ್ರೀಯುತ ಗೋವಿಂದರಾವ್ ನವಲಗುಂದ್** ಅವರು ಭಾಷ್ಯದೀಪಿಕಾದ ಹಸ್ತಪ್ರತಿಯೊಂದನ್ನು ನೀಡಿದ್ದಾರೆ. ಅವರಿಗೆ ಹಾರ್ದಿಕವಾದ ಕೃತಜ್ಞತೆಗಳು. ಅವರು ನೀಡಿದ ಈ ಹಸ್ತಪ್ರತಿಯನ್ನು **'म'** ಎಂದು ಇಲ್ಲಿ ನಮೂದಿಸಲಾಗಿದೆ. ಉಳಿದ **क, ग, प** ಹಸ್ತಪ್ರತಿಗಳು ಸಂಶೋಧನಮಂದಿರದ ಗ್ರಂಥಾಲಯದಲ್ಲಿ ದೊರೆತಿರುವುದು. **'क', 'ग'** ಹಸ್ತಪ್ರತಿಗಳು ಮೊದಲನೇ ಅಧ್ಯಾಯದ ಎರಡನೇ ಪಾದಕ್ಕೆ ಮಾತ್ರ ಸಿಕ್ಕಿದ್ದು, **'प'** ಹಸ್ತಪ್ರತಿಯು ಮೂರು, ನಾಲ್ಕನೇ ಪಾದಗಳಿಗೆ ಮಾತ್ರ ದೊರೆತಿದೆ. ಪ್ರಚಲಿತ ಪಾಠಕ್ಕೆ ಅನುಸಾರವಾಗಿ ಭಾಷ್ಯಪಾಠವನ್ನು ಕೊಡಲಾಗಿದೆ. ಹೃಷೀಕೇಶೀಯ ಪಾಠಾಂತರಗಳನ್ನು **'ह'** ಎಂದು ಸೂಚಿಸಲಾಗಿದೆ. ಹೀಗೆ ಪ್ರಕೃತ ಮೊದಲನೇ ಅಧ್ಯಾಯದ ಭಾಷ್ಯದೀಪಿಕಾದ ಪ್ರಕೃತ ಮುದ್ರಣವು ಸಂಶೋಧಿತ ಅತಿಸೂಕ್ಷ್ಮ ಆವೃತ್ತಿಯಾಗಿದ್ದು ಹಲವಾರು ಶುದ್ಧ ಪಾಠಾಂತರಗಳಿಂದ ಕೂಡಿದೆ.

'ಸ್ಥಾಲೀ ಪುಲಾಕ' ನ್ಯಾಯದಿಂದ ಮುದ್ರಿತ ಪಾಠಕ್ಕೂ ಸಂಶೋಧಿತಪಾಠಕ್ಕೂ ಇರುವ ವ್ಯತ್ಯಾಸವನ್ನು ಹಾಗು ಕೆಲವು ಲುಪ್ತವಾಕ್ಯಗಳನ್ನು ಇಲ್ಲಿ ಸಂಗ್ರಹಿಸಲಾಗಿದೆ.

| मुद्रितपाठः | संशोधितपाठः | पृष्ठसङ्ख्या |
|---|---|---|
| १. कलावेवोत्सादोक्तेः | कालादेवोत्सादोक्तेः ( म.) | ७ |
| २. 'सम्यश्चं' | स च | ३६ |
| ३. प्रसिद्धादिः | प्रसिद्धादित्यः (क.) | २०९ |
| ४. सर्वत्र | सर्वगतः (क.) | २०९ |
| ५. तुरीयोक्तचक्षुर्मयत्वादि-बाधकेन | तुरीयोक्तानुपपत्तिः, चक्षुर्मय- (क.) | २११ |
| ६. श्लक्ष्णकेशेति | दलरक्तश्लक्ष्णकेशेति | २१३ |
| ७. सर्वहृदयस्थित | सर्वप्राणिहृदयस्थित- (क.) | २१३ |
| ८. तदित्यस्येह | तत्त्वित्यस्येह (क.) | २१५ |
| ९. आवृत्तिं | अनुवृत्तिं (क.) | २१५ |
| १०. प्रतिज्ञाय | ज्ञापनाय (क.) | २१७ |
| ११. न, कुतः । | न विष्णौ सर्वगतत्वाभावो वाच्यः । कुतः (क.) | २१७ |
| १२. तस्यैव | तथा च तस्यैव विष्णोः (क.) | २१८ |
| १३. तदुक्तिसार्थक्यात् | उपासनार्था तदुक्तिरिति न वैय्यर्थ्यमिति भावः। (क.) | २१८ |
| १४. सहैकशरीरस्थत्वप्राप्तेरिति | सहैव सर्वशरीर- (क.) | २१८ |
| १५. समान | जीवसमान- (क.) | २१९ |
| १६. जन्मेति ।। जन्मादिसूत्रे जन्मादिकर्तृत्वं विष्णोरुक्तमित्यर्थः । | जन्मेति ।। 'सूत्रे' इति 'जन्मादिकर्तृत्वं विष्णोः' इति च शेषः। (क.) | २२१ |
| १७. ऊर्णनाभ्यादिवदत्तृत्वम् | ऊर्णनाभ्यादिवद्यदत्तृत्वं | २२१ |

| | | |
|---|---|---|
| १८. श्रुत्यनन्तरम् | श्रुतिरित्यनन्तरं (क.) | २२५ |
| १९. भयाद् विष्णुदीप्त्याऽनन्द- | भाणं विष्णुदीक्षानन्द.... (क.) | २२७ |
| २०. प्रभुर्विष्णुरात्मनो | आत्मनः सकाशात् – (क.) | २२८ |
| २१. पिबन्तौ किं जीवपरौ उत पररूपे एवेति संशयः सूचितो भवति। | पिबन्तौ किं भगवद्रूपविशेषौ, उतान्याविति संशयः। (क.) | २३२ |
| २२. तद्दर्शनादिति | प्रवृत्ततद्दर्शनादिति (क.) | २३३ |
| २३. सङ्कोचकाविति वा | संहारकाविति वा (क.) | २३३ |
| २४. स्वीकारमात्राभ्युपगमेन | जीवसमवेतभोगस्वीकार-मात्राभ्युपगमेन (क.) | २३६ |
| २५. तच्छब्दस्य विपरिणामेन | तच्छब्दस्य अन्तर्यामिण इति प्रकृतेरिति तत्तज्जीवस्येति च विपरिणामेन (क.) | २७० |
| २६. सर्वाश्रयत्वादपहत-पाप्मत्वादिप्रकारः | सर्वाश्रयत्वापहतपाप्मत्वादिप्रकारः (प.) | ३७० |
| २७. सुधासरसी वा | सुधासरसी वा सुधासमुद्रौ अमृतसरसी वा (प.) | ३७७ |

| लुप्तवाक्यसङ्ग्रहः | | पृष्ठसङ्ख्या |
|---|---|---|
| १. मुद्रितपाठः | देवतां स्तोत्रे मीमांसन्ते। | |
| संशोधितपाठः | महाव्रते तदाख्यकर्माङ्गभूते देवतास्तोत्रे मीमांसन्ते, विषयतयेति शेषः। (-क) | २०३ |
| २. मुद्रितपाठः | सूत्रपदेनान्वयः। | |
| संशोधितपाठः | इतः परं '**इत्यादिवाक्यविवक्षितानां तत्तात्पर्यविषयीभूतानामिति वाऽन्वयः**' इत्यधिकः पाठः क.पुस्तके। | २०६ |

| | | |
|---|---|---|
| ३. **मुद्रितपाठः** | भावः । | |
| **संशोधितपाठः** | इतः परं '**तस्मान्न व्याप्त्यभाव इति वाक्यशेषः**' इति क. पुस्तकेऽधिकः पाठः । | २०८ |
| ४. **मुद्रितपाठः** | अदितिशब्दवाच्यत्वमन्यथा | |
| **संशोधितपाठः** | अदितिशब्दवाच्यत्वं ब्रह्मणः श्रुत्यन्तरगतादितिशब्दवाच्यत्वे निमित्तमिति । अन्यथा (क.) | २२२ |
| ५. **मुद्रितपाठः** | हिशब्दः प्रसिद्धौ । | |
| **संशोधितपाठः** | हिशब्दस्तथा प्रमितत्वादिति हेतौ । तस्माल्लिङ्गं निरवकाशमिति भावः । (क.) | २२४ |
| ६. **संशोधितपाठः** | सिद्धमिति शेषः । | २२४ |
| **मुद्रितपाठः** | इदं वाक्यं मुद्रितपुस्तके नास्ति । | |
| ७. **मुद्रितपाठः** | उक्तत्वादिति वाक्यशेषः । | |
| **संशोधितपाठः** | उक्तत्वाद् विष्णोस्तु सिद्धमिति वाक्यशेषः । अत्र सर्वस्यात्तृत्वमित्यनुषज्यते (क.) | २२४ |
| ८. **मुद्रितपाठः** | भाष्यश्रुतिस्थाक्ष्यादित्यपदयोश्च यथाश्रुत एवार्थः । मण्डलपरत्वे तद्भाष्यस्थादित्यपदं | |
| **संशोधितपाठः** | भाष्यस्य यथाश्रुत एवार्थः । श्रुतिस्थाक्ष्यादित्यपदयोर्मण्डलपरत्वे चैतद्भाष्यस्थादित्यपदं- ( क.) | २४७ |
| ९. **मुद्रितपाठः** | प्रयुज्यन्ते । कथम् ? यतोऽन्तर्यामिणमपेक्ष्यैव | |
| **संशोधितपाठः** | प्रयुज्यन्ते । नैतावताऽभेदो मन्तव्यः । कुतः ? यतः ईशेशमन्तर्यामिणं विष्णुं मुख्यतो वाच्यमपेक्ष्यैव (क.) | २५४ |

१०. **मुद्रितपाठः** न कुर्वन्ति । अर्चिषम्

**संशोधितपाठः** न कुर्वन्ति सर्वथा ते ज्ञानिनः स्वज्ञानप्रसन्नभगवत्सामर्थ्यात् कर्मक्षयोत्क्रान्तियुता अर्चिषम् (क.) २६४

११. **मुद्रितपाठः** मुद्रितपाठे नास्ति ।

**संशोधितपाठः** (क.पाठे एवं वाक्यविन्यासो विद्यते):– 'जीवानां नीचोच्चभाववन्नियम्यनियामकभावसम्भवः किं न स्यादित्यत आह – नियमेति ॥ पूर्वव्याख्यानवन्नात्र सप्तमीतत्पुरुषः । किन्तु कर्मधारयः । नियम्यते व्यवस्थाप्यतेऽर्थोऽनेनेति नियमो नियामकम् । तथा च नियामकविशेषप्रमाणाभावादित्यर्थः । तथा च न दृष्टान्तमात्रेण नियम्यनियामकभावसम्भव इति भावः । ननु सिद्धान्तिनाऽप्यग्न्यादितत्तज्जीवानां जीवान्तरनियामकत्वाभ्युपगमात्-' – (क.) २६६

१२. **मुद्रितपाठः** चशब्दो हेतुसमुच्चये । आदिपदेन

**संशोधितपाठः** चोऽवधारणे । पूर्वपक्षे श्रौतशरीरशब्दः 'इदं पूर्वपक्षशरीरम्' इत्यादाविव स्वरूपार्थोऽपि भवति । आदिपदेन' (क.) २७०

१३. **मुद्रितपाठः** कुतः ? श्रौतशरीरशब्दस्य इदं पूर्वपक्षशरीर-मित्यादाविव स्वरूपार्थत्वात् । जडप्रकृतेश्च

**संशोधितपाठः** कुतः ? यस्येत्यादिना वाक्येनान्तर्यामिणः पृथिव्यादिसर्वशरीरत्वश्रवणात् । तेनैव सर्वात्मकत्वावगमात् । जडप्रकृतेश्च- (क.) २७०

